


ಹೆಗ್ಗೋಡು ಸಾಗರ ಕರ್ನಾಟಕ



ವಿಟ್ಟೋರಿಯೋ ಡಿ ಸಿಕಾ ನಿರ್ಮಿಸಿದ
ಪ್ರಸಿದ್ಧ ಇಟಾಲಿಯನ್ ಚಿತ್ರದ
ಚಿತ್ರಕಥೆ

# ಬೈಸಿಕಲ್ ಥೀವ್ಸ್

ಕೆ. ವಿ. ಸುಬ್ಬಣ್ಣ

BICYCLE THIEVES : (Kannada) Translation of the script of the film by Vittorio D' Sica by K. V. Subbanna; Printed at V. V. Printers, Shimoga; published by Akshara prakashana, Heggodu — Sagara, Karnataka 577417 on behalf of Ninasam Chitrasamaja Heggodu first Impression Aug 79 ; second Impression Aug. 87 ; Copies 1000; Pages 114 Price Rs Fifteen.

ಬೆಲೆ ಹದಿನೈದು ರೂಪಾಯಿ

ಮುದ್ರಣ : ವಿ. ವಿ. ಪ್ರಿಂಟರ್ಸ್, ಶಿವಮೊಗ್ಗ-2

ವಿಟ್ಟೊರಿಯೊ ಡಿ ಸಿಕಾ
ನಿರ್ಮಿಸಿದ
ಪ್ರಸಿದ್ಧ ನಿಯೊ ರಿಯಲಿಸ್ಟ್
ಇಟಾಲಿಯನ್ ಚಿತ್ರದ
ಚಿತ್ರ ಕಥೆ

ನೀನಾಸಮ್ ಚಿತ್ರಸಮಾಜ ಹೆಗ್ಗೋಡು ಸಾಗರ

# ಮೊದಲ ಮುದ್ರಣದ ಅರಿಕೆ

ಹಿಂದೆಯೇ ಕೂಡಿಟ್ಟುಕೊಂಡಿದ್ದ ಈ ಅನುವಾದ, ಈಗ ನಮ್ಮ ನೀನಾಸಮ್ ಚಿತ್ರಸಮಾಜದ ಆಶ್ರಯದಲ್ಲಿ ನಡೆಸಲು ಯೋಚಿಸಿರುವ ಚಲನಚಿತ್ರ ಸಹೃದಯತೆ ಕುರಿತ ಶಿಕ್ಷಣ ಶಿಬಿರದ ಸಂದರ್ಭದಲ್ಲಿ, ಅದಕ್ಕೆ ಪೂರಕವಾಗಿ, ಪ್ರಕಟವಾಗುತ್ತಿದೆ.

ಚಿತ್ರಲೇಖನವನ್ನು ಹಲವು ಮೂಲಗಳಿಂದ ಸಂಗ್ರಹಿಸಿಕೊಂಡಿದೆ. ಇದನ್ನು ಕನ್ನಡಕ್ಕೆ ಅನುವಾದಿಸಿ ಹೇಳುತ್ತ ಹೋದಂತೆ, ಕು. ಜಯಶ್ರೀ ಬರೆದುಕೊಂಡಳು. ನನ್ನ ಕರಡು ಅನುವಾದವನ್ನು ತಿದ್ದಿ ಪರಿಷ್ಕೃತಪಾಠವನ್ನು ತಯಾರಿಸಿ, ನನ್ನ ಭಾಗದ ಕೆಲಸವನ್ನು, ಅಕ್ಷರ ತಾನು ಮಾಡಿಕೊಟ್ಟಿದ್ದಾನೆ. ಈ ನೆರವುಗಳನ್ನು ನಾನು ಮೊದಲಿಗೆ ನೆನೆಯಬೇಕು.

ಈ ಪುಸ್ತಕದ ಸಿದ್ಧತೆಯಲ್ಲಿ ಮಾತ್ರವಲ್ಲದೆ ಚಲನಚಿತ್ರ ಕ್ಷೇತ್ರದಲ್ಲಿ ನಾವು ಮಾಡುವ ಎಲ್ಲ ಕೆಲಸಕ್ಕೂ ನೆರವು ಕೊಟ್ಟಿರುವ ಪುಣೆಯ ಫಿಲ್ಮ್ ಮತ್ತು ಟಿ. ವಿ. ಇನ್‌ಸ್ಟಿಟ್ಯೂಟ್ ಆಫ್ ಇಂಡಿಯಾ, ಮುಖ್ಯವಾಗಿ ಅಲ್ಲಿ ಪ್ರಾಧ್ಯಾಪಕರಾಗಿರುವ ಪ್ರೊ. ಸತೀಶ್ ಬಹಾದುರ್, ನ್ಯಾಶನಲ್ ಫಿಲ್ಮ್ ಅರ್ಖೈವ್ ಆಫ್ ಇಂಡಿಯಾ, ಮುಖ್ಯವಾಗಿ ಅಲ್ಲಿನ ಕ್ಯುರೆಟರ್ ಶ್ರೀ ಪಿ. ಕೆ. ನಾಯರ್ — ಇವರುಗಳಿಗೂ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಅಭ್ಯಾಸ ಮಾಡುತ್ತಿರುವ ಗೆ. ಕೆ. ಎಸ್. ರಾಘವೇಂದ್ರ ಅವರಿಗೂ, ಪ್ರಿಯ ಬಿ. ವಿ. ಕಾರಂತ್, ಹತ್ತಿರದ ಗಿರೀಶ ಕಾಸರವಳ್ಳಿ ಅವರುಗಳಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಹಲವು ಬಗೆಗಳಲ್ಲಿ ನೆರವಾದ ಗೆ. ವೈಕಂಠರಾಜು ಅವರಿಗೆ, ಮುದ್ರಣಕ್ಕೆ ಹಸ್ತಪ್ರತಿ ತಯಾರಿಸಿಕೊಟ್ಟ ಗೆ. ಸಿ. ಆರ್. ವಿಶ್ವನಾಥ ಭಟ್ಟ ಅವರಿಗೆ, ನಮ್ಮ ಆತುರವನ್ನು ಮನ್ನಿಸಿ ಪುಸ್ತಕವನ್ನು ಮುದ್ರಿಸಿಕೊಟ್ಟಿರುವ ನೇತ್ರಾ ಪ್ರಿಂಟರ್ಸ್ ಮಾಲಿಕರು ಮತ್ತು ಕೆಲಸಗಾರರಿಗೆ ನಾನು ಋಣಿ

೧—೪—೧೯೭೯

ಕೆ. ವಿ. ಸುಬ್ಬಣ್ಣ

# ಅಂಟೋನಿಯೊನಿ ಹೇಳಿಕೆ

"...........ಅನನ್ಯವಾದ ಕೆಲವು ಪ್ರಬುದ್ಧ ಕೃತಿಗಳೂ ಕೂಡಿ ಅನೇಕ ಸಂಖ್ಯೆಯಲ್ಲಿರುವ ನವವಾಸ್ತವಪಂಥದ ಚಲನಚಿತ್ರಕೃತಿಗಳೆಲ್ಲವೂ, ಅವು ತಯಾರಾದ ಆ ನಿರ್ದಿಷ್ಟ ಐತಿಹಾಸಿಕ ಅವಧಿಯ ದೃಷ್ಟಿಯಿಂದ, ಆ ಕಾಲದ ಅತ್ಯಂತ ಪ್ರಾತಿನಿಧಿಕವೂ ಅಧಿಕೃತವೂ ಅತ್ಯುಚಿತವೂ ಆದ ಚಿತ್ರಾಭಿವ್ಯಕ್ತಿಗಳಾಗಿದ್ದವು ಎಂದು ದೃಢವಾಗಿ ಹೇಳುತ್ತೇನೆ. ಸುತ್ತೆಲ್ಲ ತೀರ ಅಸಾಮಾನ್ಯ ಘಟನೆಗಳೇ ನಡೆಯುತ್ತಿದ್ದ ಕಾಲ ಅದು ; ವಾಸ್ತವತೆ ಜ್ವಲಂತ ಸಮಸ್ಯೆಯಾಗಿದ್ದ ಕಾಲ. ದೈನಂದಿನ ಘಟನೆಗಳು ಹಾಗೂ ಸನ್ನಿವೇಶಗಳು ಯಾವತ್ತೂ ಇಲ್ಲದಷ್ಟು ಅಸಾಮಾನ್ಯವಾಗಿದ್ದ ಆ ಕಾಲಕ್ಕೆ, ಪರಿಶೀಲಿಸಬಹುದಾಗಿದ್ದ ಅತ್ಯಂತ ಕುತೂಹಲಕರ ಸಂಗತಿಯೆಂದರೆ, ಪ್ರಾಯಃ, ವ್ಯಕ್ತಿಗೂ ಆತನ ಪರಿಸರಕ್ಕೂ, ವ್ಯಕ್ತಿಗೂ ಮತ್ತು ಸಮಾಜಕ್ಕೂ ನಡುವೆ ಇರುವ ಸಂಬಂಧ. ಬೈಸಿಕಲ್ ಥೀವ್ಸ್ ಚಿತ್ರದ ಉದಾಹರಣೆ ನೋಡಬಹುದು. ಸಾಮಾನ್ಯವಾದ ಒಬ್ಬ ಕಾರ್ಮಿಕನೇ ಅದರ ನಾಯಕ. ಯಾರೋ ಆತನ ಸೈಕಲ್ ಕದ್ದಿರುವುದರಿಂದ ಆತ ಕೆಲಸ ಕಳೆದು ಕೊಳ್ಳಬೇಕಾಗಿದೆ. ಸೈಕಲ್ ಕಳುವು ಅತ್ಯಂತ ಮುಖ್ಯ ಅಂಶವಾಗಿ ಅದೇ ಆತನ ಎಲ್ಲ ಕ್ರಿಯೆಗಳನ್ನೂ ಚೋದಿಸುತ್ತದೆ. ಈ ಅಂಶವೇ ಕಥೆಯ ಕೇಂದ್ರವಾಗುತ್ತದೆ, ಚಿತ್ರದ ಬೀಜವಾಗುತ್ತದೆ. ಇದು ನಿಜವಾಗಿ ಆ ಕಾಲಕ್ಕೆ ಅತ್ಯಂತ ಉಚಿತವೂ ಆಗಿ ರೂಪುಗೊಂಡ ಚಿತ್ರ ಎನ್ನುತ್ತೇನೆ. ಆ ಕಾಲದ ದೃಷ್ಟಿಯಿಂದ, ಚಿತ್ರದ ನಾಯಕನ ಆಂತರಿಕ ಚಿಂತನೆಗಳನ್ನಾಗಲಿ ಅಥವಾ ಅವನಿಗೂ ಅವನ ಹೆಂಡತಿಗೂ ನಡುವೆ ಇದ್ದ ಆಪ್ತಸಂಬಂಧವನ್ನಾಗಲಿ ಪರಿಶೀಲಿಸುವುದು ಅಗತ್ಯವಿರಲಿಲ್ಲ ; ಅದನ್ನು ನಿರ್ಲಕ್ಷಿಸಬಹುದಿತ್ತು. ನವವಾಸ್ತವಪಂಥದ ಚಿತ್ರಗಳ ಮುಖ್ಯ ಕಾಳಜಿ, ಆ ಕಾಲಕ್ಕೆ ಅಷ್ಟು ಅಗತ್ಯವೂ ಅಪೇಕ್ಷಣೀಯವೂ ಆದದ್ದಾಗಿತ್ತು........"

—ಮೈಕೆಲೆಂಜೆಲೊ ಅಂಟೊನಿಯೊನಿ

# ಬೈಸಿಕಲ್ ಥೀವ್ಸ್ : ಪ್ರಸ್ತಾವನೆ

## ಹಿನ್ನೆಲೆ

ಸಿನೆಮಾ ಹುಟ್ಟಿದ್ದು ೧೮೯೫ರಲ್ಲಿ. ಯೂರೋಪ್ (ಮುಖ್ಯವಾಗಿ ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ ಇ.,) ಮತ್ತು ಅಮೇರಿಕ ಸಂ. ಸಂ. ಇದಕ್ಕೆ ಮೂಲವಾದ ವೈಜ್ಞಾನಿಕ ಸಂಶೋಧನೆಗಳಿಗಾಗಿ ದುಡಿದವು. ಪ್ರಾರಂಭಕ್ಕೆ, ಅಂದರೆ ಈ ಶತಮಾನದ ಮೊದಲ ದಶಕದ ಅವಧಿಯ ತನಕ ಫ್ರಾನ್ಸ್ (ಲೂಮಿಯೇರ್ ಸೋದರರು, ಜಾರ್ಜ್‌ಮೇಲಿ), ಎರಡನೇ ದಶಕದಲ್ಲಿ ಅಮೇರಿಕ ಸಂ. ಸಂ. (ಗ್ರಿಫಿತ್, ಚಾಪ್ಲಿನ್, ಫ್ಲಾಹರ್ಟಿ ಮುಂತಾಗಿ) ಮೂರನೇ ದಶಕದಲ್ಲಿ ಸೋವಿಯತ್ ರಷ್ಯಾ (ಐಸೆನ್‌ಸ್ಟೈನ್, ಪುಡೊವ್‌ಕಿನ್ ಡೊವ್‌ಜೆಂಕೊ ಇ.,)—ಸಿನೆಮಾ ಕ್ರಮೇಣ ಯಂತ್ರಸಿದ್ಧವಾದ ಸಾಮೂಹಿಕ ಸಂಪರ್ಕ ಮಾಧ್ಯಮವಾಗಿ, ಭಾಷೆಯಾಗಿ, ಕಲಾಮಾಧ್ಯಮವಾಗಿ ರೂಪುಗೊಳ್ಳಲು ಕಾರಣವಾದವು. ಮೂರನೆಯ ದಶಕದ ತುದಿಗೆ ಮೂಕಿಯಾಗಿದ್ದ ಸಿನೆಮಾಕ್ಕೆ ಮಾತುಬಂದಾಗ, ಅದು ಪುನಃ, ಆತನಕ ಸಾಧಿಸಿದ್ದ ಮಹತ್ತೆಲ್ಲವನ್ನೂ ಮರೆತುಕೊಂಡು ಬಡವಾಯಿತು. ಮತ್ತೊಂದು ದಶಕ ಹೆಣಗಾಡಿ ಶಬ್ದವನ್ನು ಅರಗಿಸಿಕೊಂಡ ಸಿನೆಮಾ ಗಂಭೀರ ಭಾಷೆಯಾಗಿ ಕಲೆಯಾಗಿ ಮತ್ತೆ ತಲೆಯೆತ್ತಿದ್ದು ಎರಡನೇ ಮಹಾಯುದ್ಧದ ಅನಂತರ.

ಪ್ರಾರಂಭಕಾಲದಲ್ಲಿ, ಸು. ೧೯೧೪ರ ತನಕ ಮಹಾ ಅದ್ದೂರಿಯ ಐತಿಹಾಸಿಕ ಧಾರ್ಮಿಕ ಚಿತ್ರಗಳನ್ನು ತಯಾರಿಸುವುದರಲ್ಲಿ ಇಟಲಿ ಹೆಸರು ಪಡೆದುಕೊಂಡಿತ್ತು. ಆಮೇಲೆ ಕೂಡ, ಅಲ್ಲಿ ಚಿತ್ರೋದ್ಯಮ ಸತತವಾಗಿ ಮುಂದುವರೆಯುತ್ತಲೇ ಬಂದರೂ, ಮುಂದೆ ಮೂರು ದಶಕಗಳ ತನಕ ಜಗತ್ತಿನ ಗಮನವನ್ನು ಆಕರ್ಷಿಸುವ ಯಾವುದೇ ಚಿತ್ರಗಳೂ ಅಲ್ಲಿಂದ ಹೊರಬರಲಿಲ್ಲ. ಮುಸೊಲಿನಿ ಮತ್ತು ಆತನ ಸರ್ಕಾರ ಸಿನೆಮಾಕ್ಕೆ ವಿಶೇಷ ಪ್ರೋತ್ಸಾಹ ಕೊಟ್ಟಿತಾದರೂ ಪ್ರಾಯಃ ಆ ಫ್ಯಾಸಿಸ್ಟ್ ವಾತಾವರಣವೇ ಅಲ್ಲಿ ಸಿನೆಮಾ ಸೃಜನಾತ್ಮಕವಾಗಿ ಬೆಳೆಯಲು ಕಂಟಕವಾಯಿತು. ಆದರೆ ಸರ್ಕಾರದ ವಿಶೇಷ ಪ್ರೋತ್ಸಾಹದಿಂದಾಗಿ ಅಲ್ಲಿ ಸಿನೆಮಾ ಅಭ್ಯಾಸ ವಿಮರ್ಶೆಗಳಿಗೆ ಗೌರವಸ್ಥಾನ ದೊರಕಿತ್ತು. ಪ್ರತಿವರ್ಷ ನಡೆಯತೊಡಗಿದ ವೆನಿಸ್ ಚಲನ ಚಿತ್ರೋತ್ಸವ ಅಲ್ಲಿನ ಜನರಿಗೆ ಜಗತ್ತಿನ ಶ್ರೇಷ್ಠ ಚಲನಚಿತ್ರಗಳನ್ನು ನೋಡುವ ಸದವಕಾಶ ಕಲ್ಪಿಸಿಕೊಟ್ಟಿತ್ತು.

೨ನೇ ಮಹಾಯುದ್ಧ ಮುಗಿದ ಹೊಸದರಲ್ಲಿ, ೧೯೪೫ರಲ್ಲಿ, ಇಟಲಿಯ ಹೊಸಬನೊಬ್ಬ ತಯಾರಿಸಿದ THE OPEN CITY ಎಂಬ ಚಿತ್ರ ಇದ್ದಕ್ಕಿದ್ದಂತೆ ಇಡೀ ಜಗತ್ತಿನ ಗಮನವನ್ನು ಸೆಳೆಯಿತು. ಅದರ ನಿರ್ದೇಶಕ, ಆಗಿನ್ನೂ ಅಪ್ರಸಿದ್ಧನಾಗಿದ್ದ (ಮುಂದೆ ವಿಶ್ವಖ್ಯಾತಿ ಪಡೆದ) ರೊಸೆಲಿನಿ. ಆತನ ಈ ಚಿತ್ರ ಇಟಲಿಯ ಫ್ಯಾಸಿಸಮ್ ಮತ್ತು ಜರ್ಮನಿಯ ನಾಸಿಸಮ್ ಪ್ರತಿಭಟನೆಯೆಂಬಂತೆ, ಯುದ್ಧದ ಭಯಂಕರ ಪರಿಣಾಮಗಳನ್ನು ಶಕ್ತಿಯುತವಾಗಿ ಚಿತ್ರಿಸಿ ಮಾನವಿಯತೆಯನ್ನು ಮೊಳಗಿಸುವಂಥದಾಗಿತ್ತು. ಯಾವ ಅದ್ದೂರಿ ಆಡಂಬರಗಳಿಲ್ಲದೆ ಅತ್ಯಂತ ನಿರಲಂಕೃತವಾದ ಅತ್ಯಂತ ವಾಸ್ತವಿಕವಾದ ಚಿತ್ರಣ, ಪ್ರಸ್ತುತ ಬದುಕಿನ ಕೋಟಲೆ ಮತ್ತು ವಿಷಮತೆಗಳ ಬಗ್ಗೆ ಹಾಗೂ ಇವಕ್ಕೆಲ್ಲ ಮೂಲವಾದ ಅಮಾನವಿಯತೆಯ ಬಗ್ಗೆ ತೀವ್ರ ಕಾಳಜಿ, ಆಳವಾದ ಮಾನವೀಯ ದೃಷ್ಟಿ– ಇವು ಈ ಚಿತ್ರದಲ್ಲಿ ಢಾಳವಾಗಿ ಎದ್ದು ಕಾಣುವ ಅಂಶಗಳಾಗಿದ್ದವು. ಚಿತ್ರನಿರ್ಮಾಣದಲ್ಲಿ ಇದೊಂದು ಹೊಸಶೈಲಿ ಎನ್ನಿಸಿಕೊಂಡ ಕಾರಣ ಇದಕ್ಕೆ 'ನವವಾಸ್ತವಪಂಥ' (NEOREALISM) ಎಂಬ ಹೊಸ ಹೆಸರೂಬಿದ್ದಿತು.

೧೯೪೦ರ ಸುಮಾರಿಗೇ ಇಟಲಿಯ ಚಲನಚಿತ್ರ ಪ್ರಪಂಚದಲ್ಲಿ, ಹಳೇಯದನ್ನು ಪ್ರತಿಭಟಿಸುವ ಕ್ರಾಂತಿಯ ಹೊಸ ಅಲೆಯೊಂದು ಮೊಳೆಯತೊಡಗಿತ್ತು. ಅದರ ಪರಿಣಾಮವಾಗಿ ೧೯೪೩ರ ಹೊತ್ತಿಗೆ ಇಟಲಿಯ ಮತ್ತೊಬ್ಬ ಪ್ರತಿಭಾವಂತ ನಿರ್ದೇಶಕ ಲುಚಿಯನೊ ವಿಸ್ಕೊಂಟಿ ಎನ್ನುವಾತ ನಿರ್ದೇಶಿಸಿದ ಪ್ರಬಲ ವಾಸ್ತವತೆಯುಳ್ಳ OBSESSIONS ಎಂಬ ಹೊಸ ಚಿತ್ರ ಹೊರಬಂದಿತ್ತು. OPEN CITY ಯಂತ ಮಹತ್ವದ ಚಿತ್ರಕ್ಕೆ ದಾರಿತೆರದುಕೊಟ್ಟ ಚಿತ್ರ ಇದು ಎನ್ನಬಹುದು.

ನವವಾಸ್ತವಪಂಥ ಉದ್ಭವಗೊಂಡಿದ್ದರ ಹಿನ್ನೆಲೆಯನ್ನು ಕೊಂಚ ಪರಿಶೀಲಿಸಬಹುದು. ಕಣ್ಣಿಗೆ ಕಾಣುವುದನ್ನು ತದ್ವತ್ ದಾಖಲಿಸುವ ಹಂಬಲದಿಂದಲೇ ಸಿನಮಾ ಹುಟ್ಟಿಕೊಂಡದ್ದು. ಲುಮಿಯೇರ್ ಸಹೋದರರಿಗೆ ಸಿನಮಾ ಎಂದರೆ ವಾಸ್ತವದ ದಾಖಲೆಯೇ ಆಗಿತ್ತು. ಆದರೆ ಅನಂತರ ಬಂದ ಜಾರ್ಜ್ ಮೆಲೆ ವಾಸ್ತವಿಕವನ್ನು ಬಿಟ್ಟು ಕಾಲ್ಪನಿಕವನ್ನು ಸೃಜಿಸಿಕೊಡಲು ಯತ್ನಿಸಿದ. ಅಲ್ಲಿಂದ ಮೊದಲಾಗಿ, ವಾಸ್ತವಿತ ಕಾಲ್ಪನಿಕಗಳ ಮೇಲಾಟ, ಘರ್ಷಣೆ, ಸಂಯೋಜನೆಗಳ ಮುಖಾಂತರವೇ ಸಿನೆಮಾದ ಇತಿಹಾಸ ರೂಪುಗೊಳ್ಳುತ್ತ ಬಂದಿದೆ. ಈ ಇತಿಹಾಸದುದ್ದಕ್ಕೂ, ಆಗಿಂದಾಗ ಅಲ್ಲಲ್ಲಿ, ವಾಸ್ತವಿಕ ಚಿತ್ರಣದ ಬಗ್ಗೆ ಹಟತೊಟ್ಟು ದುಡಿದ ಚಿತ್ರಪಂಥಗಳಲ್ಲಿ ನವವಾಸ್ತವ ಪಂಥವೂ ಗಣನೀಯವಾದ್ದಾಗಿದೆ.

ಎರಡನೇ ಮಹಾಯುದ್ಧದ ಸಮಯದಲ್ಲಿ ಮುಖ್ಯವಾಗಿ ಯೂರೋಪ್‌ನಲ್ಲಿ, ಚಿತ್ರೋದ್ಯಮ ಯುದ್ಧಪ್ರಯತ್ನಕ್ಕೆ ನೆರವಾಗಿ ನಿಲ್ಲಬೇಕಾಯಿತು. ನಿರ್ದೇಶಕರು

ಸ್ಟುಡಿಯೋಗಳಿಂದ ಹೊರಬಂದು ಯುದ್ಧರಂಗಕ್ಕೆ ತೆಳಿದು ವಾರ್ತಾ ಚಿತ್ರ ಯುದ್ಧ ಚಿತ್ರಗಳನ್ನು ನಿರ್ಮಿಸಿಕೊಡಬೇಕಾದ್ದು ಅನಿವಾರ್ಯವಾಯಿತು. ಯುದ್ಧಕಾಲದಲ್ಲಿ ಸ್ಟುಡಿಯೋಗಳೂ ತಾಂತ್ರಿಕ ಉಪಕರಣಗಳೂ ಧ್ವಂಸಗೊಂಡವು. ಚಿತ್ರನಿರ್ಮಾಪಕರು ಯುದ್ಧಾನಂತರವೂ ಚಿತ್ರೋದ್ಯಮವಲ್ಲೇ ಮುಂದುವರಿಯಬೇಕಾದರೆ, ಸ್ಟುಡಿಯೋ ಹೊರಗೆ ನಿಜಸ್ಥಳಗಳಲ್ಲೇ ಸಿಕ್ಕಿದ ಉಪಕರಣಗಳನ್ನೇ ಬಳಸಿಕೊಂಡು ಸರಳರೀತಿಯಲ್ಲಿ ಚಿತ್ರೀಕರಣ ನಡೆಸಿಕೊಂಡು ಹೋಗಬೇಕಾದ್ದು ಅನಿವಾರ್ಯವೆನ್ನಿಸಿತು. ಇಂಥ ಒಂದು ವಾತಾವರಣ ನವವಾಸ್ತವಪಂಥದ ಉದಯಕ್ಕೆ ದಾರಿ ತೆರೆದುಕೊಟ್ಟಿತು.

ಯೂರೋಪಿನ ತುಂಬ ಅಮಾನವೀಯ ಯುದ್ಧದ ಭಯಂಕರ ನೆನಪುಗಳು ಕಾಡತೊಡಗಿದ್ದವು. ಇಟಲಿಯಲ್ಲಿ—ಫ್ಯಾಸಿಸಮ್ ನಾಸಿಸಮ್‌ಗಳು ಹಾಗೂ ಸರ್ವಾಧಿಕಾರಪದ್ಧತಿ ದೇಶವನ್ನು ಬಲಗೊಳಿಸಿ ಚಕ್ರಾಧಿಪತ್ಯ ಕಟ್ಟಿಕೊಟ್ಟಾವು ಎಂದು ಜನಕ್ಕಿದ್ದ ಭ್ರಮೆ ನಿರಸನಗೊಂಡಿತ್ತು. ಜರ್ಮನಿಯ ಕಪಟಸ್ನೇಹ ಬಯಲಾದದ್ದು, ಮಿತ್ರರಾಷ್ಟ್ರಗಳ ವಿಜಯ ಮುಂತಾದವುಗಳಿಂದ ರಾಷ್ಟ್ರ ಅಪಮಾನ ಅಪಜಯಗಳಿಗೆ ಬಲಿಯಾಗಿತ್ತು. ಒಂದು ಕಡೆ ಸರ್ವಾಧಿಕಾರ ಆಡಳಿತದ ಪೊಳ್ಳು ಘೋಷಣೆಗಳ ಸುಳ್ಳು ವೈಭವ, ಇನ್ನೊಂದು ಕಡೆ ಭಯಹಬ್ಬಿದ ವಾತಾವರಣದಲ್ಲಿ ಜನಸಾಮಾನ್ಯರು ಅನುಭವಿಸಬೇಕಾಗಿದ್ದ ಅಸಹ್ಯ ಕಾರ್ಪಣ್ಯ — ಇಂಥ ವಿಕ್ಷುಬ್ಧ ಸ್ಥಿತಿಯಲ್ಲಿ ಜಾಗೃತವಾದ ಮಾನವೀಯತೆಗೆ ಪ್ರತಿಭಟನೆಯ ಅಭಿವ್ಯಕ್ತಿ ಅಗತ್ಯವೆನಿಸಿತ್ತು. ಇಂಥ ಹಿನ್ನೆಲೆಯಲ್ಲಿ ಇಟಲಿಯ ಚಲನಚಿತ್ರದಲ್ಲಿ ನವವಾಸ್ತವಪಂಥ ಮೈದಾಳಿಕೊಂಡಿತು.

ನವವಾಸ್ತವಪಂಥದ ಮೊದಲ ಗಣನೀಯ ಚಿತ್ರ OPEN CITYಯ ಅನಂತರ ಅದೇ ಹೊಸ ಶೈಲಿಯಲ್ಲಿ ನಿರ್ಮಿತವಾದ ಇನ್ನೊಂದು ಚಿತ್ರ SHOE SHINE (೧೯೪೬) ಚಿತ್ರಾಸಕ್ತರನ್ನು ಪ್ರಬಲವಾಗಿ ಆಕರ್ಷಿಸಿತು. ಅದನ್ನು ನಿರ್ದೇಶಿಸಿಕೊಟ್ಟ ಹಾಗೂ ಮುಂದೆ ಕೆಲವು ವಿಶ್ವವಿಖ್ಯಾತ ಚಿತ್ರಗಳನ್ನು ನಿರ್ಮಿಸಿ ಚಲನಚಿತ್ರ ಕಲೆಯ ಈ ಹೊಸ ಹಾದಿಯನ್ನು ಸನೆಸಿಕೊಟ್ಟ ಪ್ರತಿಭಾಶಾಲಿ ವಿಟ್ಟೋರಿಯೊ ಡಿ ಸಿಕಾ ಎನ್ನುವಾತ.

## ವಿಟ್ಟೋರಿಯೊ ಡಿ ಸಿಕಾ

ಇಟಲಿಯಲ್ಲಿ ೧೯೦೨ರಲ್ಲಿ ಹುಟ್ಟಿದ ವಿಟ್ಟೋರಿಯೊ ಮ್ಯಾಜಿಸ್ಟ್ರೇಟ್ ಒಬ್ಬರ ಮಗ, ತಾನೂ ನ್ಯಾಯಶಾಸ್ತ್ರ ಕಲಿಯಲು ತೊಡಗಿದ್ದಾಗ, ಅವರ ಕುಟುಂಬ ರೋಮ್ ನಗರಕ್ಕೆ ಬಂದು ನೆಲೆಸಿತು. ಅಲ್ಲಿ ಬಂದಮೇಲೆ ವಿಲಾಸಿ ರಂಗಭೂಮಿಯಲ್ಲಿ ಆತ

ಆಸಕ್ತಿಗೊಂಡ. ಕ್ರಮೇಣ ವೃತ್ತಿನಟನಾದ. ವಿನೋದ ನಾಟಕಗಳ ನಟನಾಗಿ ಖ್ಯಾತನಾದ. ಆಮೇಲೆ ಚಲನಚಿತ್ರಗಳಲ್ಲಿ ನಟಿಸಲು ತೊಡಗಿ ಭಾರೀ ಪ್ರಸಿದ್ಧಿ ಗಳಿಸಿಕೊಂಡ. ಚಲನಚಿತ್ರಗಳಿಗೆ 'ಚಿತ್ರಲೇಖನ'ಗಳನ್ನು ಬರೆದ. ಅಲ್ಲಿಂದ ತಾನೇ ಚಿತ್ರ ನಿರ್ದೇಶಕನೂ ಆದ.

ಆತ ತನ್ನ ಮೊದಲ ಚಿತ್ರ ತಯಾರಿಸಿದ್ದು ೧೯೪೦ರಲ್ಲಿ. ತನಗೆ ರಂಗಖ್ಯಾತಿ ತಂದುಕೊಟ್ಟ ಒಂದು ವೈನೋದಿಕ ನಾಟಕವನ್ನು ಆಧರಿಸಿ ತಯಾರಿಸಿದ ಈ ಚಿತ್ರ TWO DOZEN SCARLET ROSES ಎಂಬುದು. ಈತನ ಎರಡನೆಯ ಚಿತ್ರಕ್ಕೆ (TRESA VENERDI–೧೯೪೧) ಚಿತ್ರಲೇಖನ ಬರೆದುಕೊಟ್ಟಾತ ಸಿಸರೆ ಜವೆಟ್ಟನಿ ಎಂಬ ಪ್ರತಿಭಾವಂತ ಲೇಖಕ. ಮುಂದೆ ಆತನೇ ಡಿ ಸಿಕಾನ ತಂಡದಲ್ಲಿ ಮುಖ್ಯನಾಗಿ ನಿಂತ ಮತ್ತು ನವವಾಸ್ತವತಾಪಂಥದ ವಕ್ತಾರನೆನಿಸಿಕೊಂಡ.

೧೯೪೬ರಲ್ಲಿ, ಆದಾಗಲೇ ಏಳು ಚಿತ್ರಗಳನ್ನು ನಿರ್ದೇಶಿಸಿದ್ದ ಡಿ ಸಿಕಾ ತನ್ನ ಎಂಟನೆಯ ಚಿತ್ರವಾಗಿ ನಿರ್ಮಿಸಿದ SHOE SHINE ವಿಶ್ವದ ಚಿತ್ರಾಸಕ್ತರ ಕಣ್ಣಲ್ಲಿ ಸೆಳೆಯುವ ಸಾಧನೆಯಾಯಿತು. ರಸ್ತೆಯ ಅಂಚುಗಳಲ್ಲಿ ಕೂತು, ಬೂಟು ತಿಕ್ಕಿ ಹೊಳಪು ಮಾಡಿಕೊಡುವ ಚಿಕ್ಕಚಿಕ್ಕ ಬೀದಿಮಕ್ಕಳ ಬದುಕಿನ ವಾಸ್ತವ ಚಿತ್ರ ಇದು; ಆ ಬೀದಿಮಕ್ಕಳ ಕಡುಬಡತನ, ಬಡತನದಿಂದಾಗಿ ಮೊಳೆತುಕೊಂಡು ಬೆಳೆಯುವ ಅಪರಾಧಲಂಪಟತ್ವ, ಅಲ್ಲಿಂದ ಅವರಿಗೆ ದಾರಿ ತೆರೆಯುವ ಸೆರೆಮನೆ, ಸೆರೆಮನೆಯಲ್ಲಿನ ಅಮಾನವೀಯ ಹಿಂಸೆಗಳಿಂದ ಅವರ ಬದುಕು ಮತ್ತೂ ಒರಟಾಗುತ್ತ ಅವರು ಮಾನವೀಯತೆಯನ್ನೇ ಕಳೆದುಕೊಳ್ಳುವುದು—ಮುಂತಾದದ್ದರ ವಾಸ್ತವದಾರುಣ ಕಥೆ. ಈ ಚಿತ್ರದ ಬಗ್ಗೆ ಡಿ ಸಿಕಾ ಹೀಗೆ ಹೇಳಿಕೊಂಡಿದ್ದಾನೆ: "ನನ್ನ ಈ ಚಿತ್ರದ ನಿಜವಾದ ಉದ್ದೇಶವೆಂದರೆ ಮಾನವೀಯ ಐಕ್ಯವನ್ನು ಹುಡುಕುವುದು, ಅಹಂಕಾರ ಮತ್ತು ಔದಾಸೀನ್ಯಗಳ ವಿರುದ್ಧ ಹೋರಾಡುವುದು. ಇಲ್ಲಿ ವಸ್ತುವನ್ನು ದುರಂತ ರೀತಿಯಲ್ಲಿ ನಿರೂಪಿಸಿದ್ದೇನೆ."

ಇದಾದಮೇಲೆ ಡಿ ಸಿಕಾ ನಿರ್ಮಿಸಿದ್ದು BICYCLE THIEVES (ಅಥವಾ BICYCLE THIEF), ೧೯೪೮ರಲ್ಲಿ. BICYCLE THIEVES ಡಿ ಸಿಕಾನ ನಿರ್ಮಿತಿಗಳಲ್ಲೇ ಅತ್ಯುತ್ತಮವಾದ್ದು ; ನಿಯೊ ರಿಯಲಿಸ್ಟ್ ಪಂಥದ ಚಿತ್ರಗಳಿಗೆ ಅತ್ಯುತ್ತಮ ಮಾದರಿಯನ್ನಬಹುದಂಥಾದ್ದು ; ಸಿನೆಮಾ ಇತಿಹಾಸದ ಮೈಲುಗಳಲ್ಲಿ ಒಂದಾಗಿ ನಿಲ್ಲುವಂಥದು; ವಿಶ್ವ ಚಲನಚಿತ್ರದ ಗಣ್ಯಕೃತಿಗಳಲ್ಲಿ ಕೂಡಿಕೊಳ್ಳುವಂಥದು.

BICYCLE THIEVESನ್ನು ಹಿಂಬಾಲಿಸಿ ಆತ ತಯಾರಿಸಿದ ಇನ್ನೆರಡು ಚಿತ್ರಗಳು (MIRACLE IN MILAN–೧೯೫೧ UMBRETO D–೧೯೫೨)

ಕೂಡ ಜಾಗತಿಕ ಚಲನಚಿತ್ರದ ಗಣ್ಯಕೃತಿಗಳೆನಿಸಿಕೊಂಡಿವೆ. ಮೊದಲನೆಯದು ಹಸಿ ವಾಸ್ತವತೆಯ ಜತೆಯಲ್ಲಿ ದಂತಕಥೆಯ ಕಲ್ಪನಾಲಹರಿಯನ್ನು ಒಗ್ಗೂಡಿಸಿ ಆ ಮೂಲಕ ಪ್ರಸ್ತುತ ಸಾಮಾಜಿಕ ದುರಂತವನ್ನು ಪರಿಶೀಲಿಸುವ ಪ್ರಾಯೋಗಿಕ ಕೃತಿ. ಎರಡನೆಯದು, ಆತ ಪುನಃ ಕೇವಲವಾಸ್ತವಕ್ಕೇ ಮರಳಿ, ವೃದ್ಧಾಪ್ಯದ ದಾರುಣ ಏಕಾಂತವನ್ನು ಹೃದಯಂಗಮವಾಗಿ ಚಿತ್ರಿಸಿಕೊಟ್ಟ ಚಿತ್ರ.

ಯುದ್ಧಕಾಲದ ಹಾಗೂ ಯುದ್ಧಾನಂತರದ ಇಟಲಿಯ ಭಯಾನಕ ಅನುಭವಗಳು ದುಃಸ್ವಪ್ನಗಳು ಕ್ರಮೇಣ ನೆನಪಿನ ಮೂಲೆ ಸೇರತೊಡಗಿದ್ದವು. ಅಲ್ಲಿನ ಚಿತ್ರಜಗತ್ತಿನಲ್ಲಿ ಹೊಸ ಪ್ರಯೋಗಗಳ ಬಗ್ಗೆ ಮೊದಲು ಕಂಡ ಉತ್ಸಾಹ ಕ್ರಮೇಣ ತಣ್ಣಗಾಗತೊಡಗಿತ್ತು. ಇಂಥ ಸ್ಥಿತಿಯಲ್ಲಿ ಹೊಸ ರೀತಿಯ ಚಿತ್ರಗಳನ್ನು ನಿರ್ಮಿಸುವುದು ಕಷ್ಟವಾಗತೊಡಗಿತು. ಇದೇ ಸಂದರ್ಭದಲ್ಲಿ ಡಿ ಸಿಕಾನ ವಿಶ್ವಖ್ಯಾತಿಯಿಂದ ಆಸೆಗೊಂಡ ಹಾಲಿವುಡ್ ಚಿತ್ರನಿರ್ಮಾಪಕರು ಈತನನ್ನು ಅಲ್ಲಿಗೆ ಆಹ್ವಾನಿಸಿದರು. ಡಿ ಸಿಕಾ ಹಾಲಿವುಡ್‌ಗೆ ಹೋದ. ಆದರೆ ಅಲ್ಲಿ ಚಿತ್ರ ತಯಾರಿಸಲು ಸಾಧ್ಯವಾಗದೆ ಹಾಗೇ ಮರಳಿದ.

ಮುಂದೆ ಡಿ ಸಿಕಾ ತನ್ನ ದೇಶದಲ್ಲೇ ಅನೇಕ ಚಿತ್ರಗಳನ್ನು ನಿರ್ಮಿಸಿದ. ಆದರೆ ಅವುಗಳಲ್ಲಿ ಯಾವುದೇ ಚಿತ್ರವೂ ಆತ ಹಿಂದೆ ಸಾಧಿಸಿದ್ದ ಶ್ರೇಷ್ಠತೆಯ ಮಟ್ಟವನ್ನು ತಲುಪಲಿಲ್ಲ; ಯಾವುದೂ ವಿಶ್ವಕೃತಿಗಳಲ್ಲಿ ಗಣನೆಯಾಗುವಂಥ ನಿರ್ಮಿತಿಯಾಗದೆ ಸಾಮಾನ್ಯದರ್ಜೆಯ ಚಿತ್ರಗಳಾಗಿ ಉಳಿದವು.

ಚಿತ್ರನಿರ್ದೇಶನಕ್ಕೆ ತೊಡಗಿದಾಗಿನಿಂದಲೂ ಆತ, ಅದಕ್ಕೆ ಹಿಂದಿನ ತನ್ನ ಆಸಕ್ತಿಯಾಗಿದ್ದ ನಟನೆಯನ್ನು ಕೈಬಿಡದೆ ಮುಂದುವರಿಸಿಕೊಂಡು ಬಂದಿದ್ದ. ಒಂದು ಕಡೆ ಸಾಮಾಜಿಕವಾಗಿ ಅರ್ಥಪೂರ್ಣವೂ ಸಮಕಾಲೀನವೂ ಆದ ಚಿತ್ರಗಳನ್ನು ನಿರ್ಮಿಸಬೇಕು ಎಂಬ ಹಂಬಲವುಳ್ಳ ಚಿತ್ರನಿರ್ದೇಶಕನಾಗಿ, ಇನ್ನೊಂದು ಕಡೆ ಮನೋರಂಜನೆಯ ಉದ್ಯಮ ಚಿತ್ರಗಳಲ್ಲಿ ಅಂತರ್ರಾಷ್ಟ್ರೀಯ ತಾರಾಸುಂದರಿಯರ ಜತೆ ಅಭಿನಯಿಸುವ ವೈಭವದ ನಟನಾಗಿ, ಇಬ್ಬಂದಿತನವನ್ನು ನಿರಾಳವಾಗಿ ಅರಗಿಸಿಕೊಂಡ ಆಶ್ಚರ್ಯವಾಗಿದ್ದಾನೆ. ತನ್ನ ಗಳಿಕೆಗಳಿಂದ ದೊಡ್ಡ ಸಂಪತ್ತನ್ನೇ ಕೂಡಿಹಾಕಿಕೊಂಡಿದ್ದರೂ ಜನಸಾಮಾನ್ಯರ ಬಗ್ಗೆ, ಅವರ ಬಡತನ ಕಷ್ಟಕೋಟಲೆಗಳ ಬಗ್ಗೆ ನಿರಂತರ ಕಳಕಳಿಯುಳ್ಳವನಾಗಿ ಉಳಿದಿದ್ದಾನೆ.

ಡಿ ಸಿಕಾ ಉತ್ತಮ ನಟನಷ್ಟೇ ಅಲ್ಲ, ಎಂಥ ತರಬೇತಿಯಿಲ್ಲದ ಹೊಸ ನಟರಿಂದಲೂ ಉತ್ತಮ ಅಭಿನಯ ಪಡೆದುಕೊಳ್ಳಬಲ್ಲ ಚಾತುರ್ಯವುಳ್ಳವನು ಎನ್ನುತ್ತಾರೆ.

'ಅಲೂಗಡ್ಡೆಯ ಮೂಟೆ ತಂದು ಕೊಡಿ, ಆತ ಅದರಿಂದಲೂ ಒಳ್ಳೆಯ ನಟನೆ ಮಾಡಿಸುತ್ತಾನೆ' ಎಂದು ಆತನ ಬಗ್ಗೆ ಇಟಲಿಯಲ್ಲಿ ಪ್ರಶಂಸಿಸಿ ಮಾತ ನಾಡುತ್ತಾರಂತೆ.

ಡಿ ಸಿಕಾನ ಮುಖ್ಯ ಚಿತ್ರಗಳು ಇವು :—

TWO DOZEN SCARLET ROSES (೧೯೪೦), TERESA VENERDI (೧೯೪೦), THE CHILDREN LOOK AT US (೧೯೪೩), THE DOOR TO PARADISE (೧೯೪೪), SHOE SHINE (೧೯೪೬), BICYCLE THIEVES (೧೯೪೮), MIRACLE IN MILAN (೧೯೫೦), UMBRETO D (೧೯೫೨), MADAME DE (೧೯೫೨). INDISCRETION (೧೯೫೩), BREAD LOVE AND DREAMS (೧೯೫೩). GOLD OF NAPLES (೧೯೫೪), A FARE-WELL TO ARMS (೧೯೫೭). IL GENERALE DELLA ROVERE (೧೯೫೯), TWO WOMEN (೧೯೬೦), THE CONDEMNED OF ALTONA (೧೯೬೩), A NEW WORLD (೧೯೬೬), THE BIGGEST BUNDLE OF THEM ALL (೧೯೬೬), AFTER THE FOX (೧೯೬೬), WOMAN TIMES SEVEN (೧೯೬೭). THE SHOES OF THE FISHERMAN (೧೯೬೮), A PLACE FOR LOVERS (೧೯೬೯). SUN FLOWER (೧೯೭೦) — ಇತ್ಯಾದಿ.

ಇವುಗಳಲ್ಲಿ SHOE SHINE, BICYCLE THIEVES, MIRACLE IN MILAN, UMBRETO D — ಈ ನಾಲ್ಕು ಚಿತ್ರಗಳು ಡಿ ಸಿಕಾ ವಿಶ್ವಚಲನ ಚಿತ್ರಕ್ಕೆ ಸಲ್ಲಿಸಿದ ಗಣ್ಯಕಾಣಿಕೆಗಳಾಗಿ ನಿಲ್ಲುತ್ತವೆ.

### ಪಲಾಯನವೊಂದೇ ಸಾಧ್ಯ — ಮಿಲಾನ್‌ನಲ್ಲಿ ಪವಾಡ

MIRACLE IN MILAN ಚಿತ್ರ ಜವೆಟ್ಟನಿಯ ಒಂದು ಕಾದಂಬರಿಯನ್ನು ಆಧರಿಸಿ ಆತ ಮತ್ತು ಡಿ ಸಿಕಾ ಕೂಡಿ ಬರೆದ ಚಿತ್ರಲೇಖನದಿಂದ ತಯಾರಾದ್ದು.

ಈ ಚಿತ್ರದ ನಾಯಕ ತೋತೊ ಸರ್ವತ್ರ ಸಮಾನತೆ ಸುಖಗಳನ್ನು ಹಂಬ ಲಿಸುವ ಆದರ್ಶಜೀವಿ. ತಾನು ವಾಸಿಸುವ ಮಿಲಾನ್ ನಗರದಲ್ಲಿ, ತನಗೆ ಹತ್ತಿರ ವಾಗಿರುವ ಕೊಳಚೆ ಪ್ರದೇಶವೊಂದರಲ್ಲಿನ ನಿವಾಸಿಗಳನ್ನು ಉದ್ಧರಿಸಲು ಆತ ಮುಂಪಾಗುತ್ತಾನೆ ; ಆ ಜಾಗವನ್ನು ಪುನರ್ನಿರ್ಮಿಸಲು ಶ್ರಮಿಸುತ್ತಾನೆ. ಆಗ, ಆ ನೆಲದಲ್ಲಿ, ನೆಲದ ಮೇಲುಪದರಿನಲ್ಲೇ ಎಣ್ಣೆಯಿರುವುದು ಪತ್ತೆಯಾಗುತ್ತದೆ. ಇದರಿಂದ ಕೊಳಚೆ ನಿವಾಸಿಗಳ ದಾರಿದ್ರ್ಯ ನಿವಾರಣೆಯಾಗಿ ಹೋಗುತ್ತದೆ ಎಂದು ಖುಶಿಪಟ್ಟು

ಕೊಳ್ಳುವಾಗ, ಆ ನೆಲದ ಹಕ್ಕು ಹೊಂದಿರುವ ಮಾಲಕ ಅಲ್ಲಿ ಬಂದು ತನ್ನ ಅಧಿಕಾರ ಸ್ಥಾಪಿಸುತ್ತಾನೆ. ಇನ್ನೇನು ಮಾಡುವುದು ಎಂದು ತೋತೋ ಚಿಂತಾಕ್ರಾಂತನಾಗಿ ಕೂತಿರುವಾಗ, ಮೃತಳಾದ ಆತನ ಸಾಕುತಾಯಿ ಸ್ವರ್ಗದಿಂದ ತಪ್ಪಿಸಿಕೊಂಡು ಬಂದು, ಈತನಿಗೆ ಸ್ವರ್ಗಲೋಕದ ಅದ್ಭುತಶಕ್ತಿಯ ಪಾರಿವಾಳವೊಂದನ್ನು ಕೊಟ್ಟು ಅದರ ಮೂಲಕ ಆ ಬಡಜನರನ್ನು ಉದ್ಧರಿಸಲು ಹೇಳುತ್ತಾಳೆ. ಪಾರಿವಾಳದ ಅದ್ಭುತಶಕ್ತಿಯಿಂದಾಗಿ ನೆಲದ ಮಾಲಕನ ಆಟ ನಡೆಯದೆ ಆತ ಹಿಂದೆ ಸರಿಯುತ್ತಾನೆ. ಕೊಂಪೆಯ ಬಡಜನಕ್ಕೆ ಆ ಪಾರಿವಾಳ ಬೇಕೆಂದಿದ್ದನ್ನೆಲ್ಲ ಕೊಡುತ್ತದೆ. ಆದರೆ ಅಷ್ಟರಲ್ಲಿ ಆ ಪಾರಿವಾಳ, ತಪ್ಪಿಸಿಕೊಂಡು ಊರಿನ ಪಾರಿವಾಳಗಳ ಜೊತೆ ಸೇರಿಕೊಂಡುಬಿಡುತ್ತದೆ. ಅದನ್ನು ಹುಡುಕುವುದು ಅಸಾಧ್ಯವಾಗುತ್ತದೆ. ಈಗ ಪುನಃ ನೆಲದ ಮಾಲಕನ ಕೈ ಮೇಲಾಗುತ್ತದೆ. ಕೊಳಚೆ ನಿವಾಸಿಗಳೆಲ್ಲರ ಜೊತೆಯಲ್ಲಿ ತೋತೋನನ್ನು ಸೆರೆಹಿಡಿದು ಒಯ್ಯುತ್ತಾರೆ. ಇದೇ ಹೊತ್ತಿಗೆ ಸ್ವರ್ಗದ ಕಾವಲುಗಾರರು ಪಾರಿವಾಳವನ್ನು ಹುಡುಕುತ್ತ ಬರುತ್ತಾರೆ. ಅವರಿಗೂ ಅದು ಸಿಗುವುದಿಲ್ಲ. ಆದರೆ, ತೋತೋನ ಪ್ರೇಯಸಿ ಹೇಗೋ ಕಷ್ಟದಿಂದ ತಾನೇ ಆ ಪಾರಿವಾಳವನ್ನು ಹುಡುಕಿ ಹಿಡಿದು, ಆತ ಸೆರೆಮನೆ ಸೇರುವಷ್ಟರಲ್ಲಿ ಅವನ ಕೈಗೆ ತಂದು ಒಪ್ಪಿಸುತ್ತಾಳೆ. ಇಷ್ಟು ಹೊತ್ತಿಗೆ ತೋತೋಗೆ ಈ ಲೋಕ ಬಡವರಿಗೆ ಸ್ಥಳವಲ್ಲ ಎಂದು ಮನದಟ್ಟಾಗಿರುವುದರಿಂದ ಆತ, ತನ್ನ ಸಂಗಡಿಗರಿಗೆಲ್ಲ ಒಂದೊಂದು ಪೊರಕೆ ಕೊಡಿಸಿ, ಆ ಪೊರಕೆಗೆ ಪಾರಿವಾಳದ ನೆರವಿನಿಂದ ಹಾರುವ ಶಕ್ತಿ ಬರುವಹಾಗೆ ಮಾಡಿ, ಎಲ್ಲರನ್ನೂ ಹಕ್ಕಿಗಳಹಾಗೆ ಹಾರಿಸಿಕೊಂಡು ಹೋಗುತ್ತಾನೆ. ಅವರೆಲ್ಲ ಸುಖಸಮತೆ ಸಮೃದ್ಧಿಗಳ ಬೇರೊಂದು ಆದರ್ಶರಾಜ್ಯದಲ್ಲಿ ಹೋಗಿ ನೆಲೆಸುತ್ತಾರೆ.

ಶೋಷಿತ ಜನವರ್ಗದ ಕಷ್ಟಕಾರ್ಪಣ್ಯಗಳು, ಆಸೆ ಆಕಾಂಕ್ಷೆಗಳು, ವಿಫಲ ಕನಸುಗಳು — ಇವುಗಳನ್ನು ವಾಸ್ತವಿಕತೆ-ಕಲ್ಪಕತೆಗಳ ವಿಚಿತ್ರ ದ್ವಂದ್ವ ಶೈಲಿಯಲ್ಲಿ ಚಿತ್ರಿಸುವ ಈ ಚಿತ್ರ ವಿಚ್ಛಿದ್ರಗೊಂಡ ಮಾನವೀಯತೆಯನ್ನು ಕಟುವಾಗಿ ವಿಡಂಬಿಸುತ್ತದೆ. "ಇದು ರಾಜಕೀಯ ಚಿತ್ರವಲ್ಲ, ಇಪ್ಪತ್ತನೇ ಶತಮಾನದ ಸತ್ಯ ಚಿತ್ರ" ಎಂದಿದ್ದಾನೆ ಡಿ ಸಿಕಾ.

## ವೃದ್ಧಾಪ್ಯದ ಏಕಾಂತ ಬವಣೆ – ಉಂಬ್ರೆಟೊ ಡಿ

ಉಂಬ್ರೆಟೊ ಡಿ ಚಿತ್ರದ ಚಿತ್ರಲೇಖವನ್ನು ಜವೆಟ್ಟಿನಿ ಒಬ್ಬನೇ ಸಿದ್ಧಗೊಳಿಸಿದ್ದು. ಮಿಲಾನ್‌ನ ಕಥೆಯ ಅನಂತರ ಡಿ ಸಿಕಾ ಪುನಃ ಹಸಿ ವಾಸ್ತವತೆಗೆ ಮರಳಿ ಈ ಚಿತ್ರ ತಯಾರಿಸಿದ. ಆತ ಇದನ್ನು ತನ್ನ ತಂದೆಗೆ ಅರ್ಪಿಸಿದ್ದಾನೆ. ಈ

ಚಿತ್ರದಲ್ಲಿ ನಾಯಕನ ಪಾತ್ರ ವಹಿಸಿದವನು ಸಮಾಜ ಶಾಸ್ತ್ರದಲ್ಲಿ ತೀವ್ರ ಆಸಕ್ತಿ ಹೊಂದಿದ್ದು ಅದೇ ವಿಷಯದ ಅಧ್ಯಾಪಕನಾಗಿ ಕೆಲಸ ಮಾಡುತ್ತಿದ್ದವನು. ಹಿಂದೆ ಯಾವತ್ತೂ ನಟನಾಗಿರದಿದ್ದ ಈತ, "ಕಲೆಯ ಅನುಭವಕ್ಕಾಗಿ ನಾನು ಈ ಚಿತ್ರದಲ್ಲಿ ನಟಿಸಿದ್ದಲ್ಲ, ಸಾಮಾಜಿಕ ಸಮಸ್ಯೆಯೊಂದರ ಅಧ್ಯನದಲ್ಲಿ ಭಾಗಿಯಾಗುವ ಆಸೆಯಿಂದ ನಟಿಸಿದೆ". ಎಂದಿದ್ದಾನೆ.

ಉಂಬ್ರೆಟೊ ಡೊಮೆನಿಕೊ ಫೆರಾರಿ (ಅಥವಾ, ಸಂಕ್ಷೇಪದಲ್ಲಿ ಉಂಬ್ರೆಟೊ ಡಿ– ಹಾಗೆ ಕರೆದುಕೊಳ್ಳುವುದೇ ಆತನಿಗೆ ಇಷ್ಟ) ಗುಮಾಸ್ತೆಯ ಕೆಲಸದಲ್ಲಿದ್ದು ರಿಟೈರಾಗಿ ಈಗ ವೃದ್ಧಾಪ್ಯದ ಸೀಮೆಯಲ್ಲಿ ಕಾಲಿಟ್ಟಿರುವಾತ. ಹಲವು ಅಂತಸ್ತುಗಳ, ವಸತಿ ಕೋಣೆಗಳಿರುವ ದೊಡ್ಡ ವಠಾರದ ಮನೆಯೊಂದರ ಕಿರುಕೋಣೆಯಲ್ಲಿ ಒಬ್ಬಂಟಿಯಾದ ಈತನ ವಾಸ. ಒಬ್ಬಂಟಿತನದಲ್ಲಿ ಒಡನಾಡಿಯಾಗಿ ಪ್ರೀತಿಯ ನಾಯಿಯೊಂದಿದೆ. ಏಕಾಂತ ನೀರವದ ನೀರಸ ರಾತ್ರಿಗಳನ್ನು ಕಲಕಲು ಆ ವಠಾರದ ಕೆಳ ಅಂಗಳದಲ್ಲಿ ಬಯಲು ಸಿನೆಮಾವೊಂದು ನಡೆಯುತ್ತಿರುತ್ತದೆ. ವೃದ್ಧಾಪ್ಯದ ಜೊತೆಗೆ ಈತನಿಗೆ ರೋಗ ಬೇರೆ ಅಂಟಿಕೊಂಡಿದೆ. ತನ್ನನ್ನು ತನ್ನ ನಾಯಿಯನ್ನು ಸಾಕಿಕೊಳ್ಳುವುದೇ ಪ್ರಯಾಸವಾಗಿರುವ ಆರ್ಥಿಕಸ್ಥಿತಿಯಲ್ಲಿ ಮನೆ ಬಾಡಿಗೆ ಬಾಕಿ ಬಿದ್ದಿದೆ. ಮನೆ ಮಾಲಕಿ ಆಸೆಬುರುಕಿಯಾದ ಕ್ಷುದ್ರ ಹೆಂಗಸು. ಆಕೆ ಈತನನ್ನು ಮನೆಯಿಂದ ಹೊರ ಹಾಕುವುದರಲ್ಲಿದ್ದಾಳೆ. ಈತ ಜತೆಯ ಪೆನ್‌ಶನ್‌ದಾರರನ್ನು ಕೂಡಿ ಪೆನ್‌ಶನ್ ಹೆಚ್ಚಿಸ ಬೇಕೆಂದು ಒತ್ತಾಯಿಸಿ ಪ್ರದರ್ಶನ ಏರ್ಪಡಿಸುತ್ತಾನೆ. ಆದರೆ ಅದಕ್ಕೆ ಸೋಲಾಗುತ್ತದೆ. ಪ್ರೀತಿಯ ನಾಯಿಯನ್ನು ಸಾಕಿಕೊಳ್ಳಲೂ ಆಗದೆ, ಬಿಟ್ಟುಕೊಡಲು ಆಗದೆ ಪೇಚಾಡು ತ್ತಾನೆ. ಮನೆ ಮಾಲಕಿಯ ಜೊತೆ ಕಾದಾಡುವುದು ಅನಿವಾರ್ಯವಾಗಿ ಅದು ತನ್ನ ಸಹಜ ಗಾಂಭೀರ್ಯಕ್ಕೆ ಎಂಥ ಕುಂದು ಎಂದು ಮಜುಗರ ಪಟ್ಟುಕೊಳ್ಳುತ್ತಾನೆ. ಮನೆಯ ಕೆಲಸದವಳೊಬ್ಬಳು ಈತನ ಬಗ್ಗೆ ಮರುಕವಿಟ್ಟುಕೊಂಡು, ಮಾಲಕಿಯ ಕಣ್ಣು ತಪ್ಪಿಸಿ ಆಗಾಗ ಈತನಿಗೆ ನೆರವಾಗುತ್ತಿರುತ್ತಾಳೆ. ಅವಳ ಬಗ್ಗೆ ಈತನಿಗೆ ಕೃತಜ್ಞತೆ. ಆದರೆ, ಆಕೆ ಸೈನಿಕರನ್ನು ಕಂಡರೆ ಮೋಹಗೊಂಡು ಓಡುತ್ತಾಳಲ್ಲ ಎನ್ನು ವುದು ಈತನ ಮಧ್ಯಮ ವರ್ಗದ ನೈತಿಕತೆಗೆ ಒಂದು ಆಘಾತ, ಕಿರಿ ಕಿರಿ. ಬಂಗಾರದ ವಾಚು, ಡಿಕ್ಷನರಿ ಮುಂತಾಗಿ ಇದ್ದುದೆಲ್ಲವನ್ನೂ ಮಾರಿದರೂ ನೀಗದೆ, ಕಡೆಗೆ ಖಾಯಿಲೆ ನಟಿಸಿ ಆಸ್ಪತ್ರೆ ಸೇರಿಕೊಳ್ಳುತ್ತಾನೆ. ಆಸ್ಪತ್ರೆಯಿಂದ ಮರಳುವಾಗ ಈತನ ಮನೆ ಖಾಲಿ ಯಾಗಿರುತ್ತದೆ. ; ಈತ ನೆರಳಿಲ್ಲದೆ ನಿಲ್ಲಬೇಕಾಗುತ್ತದೆ. ಅಂಥ ಸ್ಥಿತಿಯಲ್ಲಿ ದಿಕ್ಕುಗಾಣದೆ ತನ್ನ ನಾಯಿಯೊಡನೆ ರೈಲಿನ ಕೆಳಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ನಾಯಿ ತಪ್ಪಿಸಿಕೊಂಡು ಓಡಿದಾಗ ಅದನ್ನು ಹಿಡಿಯಲು ಹೋಗಿ

ಈತನೂ ಆತ್ಮಹತ್ಯೆಯಿಂದ ಪಾರಾಗುತ್ತಾನೆ. ತನ್ನ ನಾಯಿಯೊಂದಿಗೆ ಹಾಳುಬಿದ್ದ ಪಾರ್ಕ್ ಒಂದರಲ್ಲಿ ಈತ ಕೂತಿರುವಂತೆ, ದೂರದಲ್ಲಿ ಯಾವುದೋ ರೈಲು ಧಾವಿಸಿ ಹೋಗುತ್ತಿರುವ ಸದ್ದಿನೊಡನೆ ಚಿತ್ರ ಮುಕ್ತಾಯವಾಗುತ್ತದೆ.

"ಚಲನಚಿತ್ರ ಯಾವತ್ತೋ ಹಿಂದೆ ನಡೆದದ್ದನ್ನು ತೋರಿಸುವುದಲ್ಲ, ಅವು ನೇರ ವರ್ತಮಾನದ ಮೇಲೆ ಕಾಲೂರಿ ನಿಲ್ಲಬೇಕು" ಎಂಬ ಜವೆಟ್ಟನಿಯ ಮಾತಿಗೆ ಈ ಚಿತ್ರ ಉದಾಹರಣೆಯಂತಿದೆ. ಚಿತ್ರದ ಆವರಣ ತೀರ ವರ್ತಮಾನದ್ದು. ಆದರೆ, ಅದನ್ನು ನೋಡುವ ದೃಷ್ಟಿ ಅಷ್ಟು ಮಾನವೀಯವಾದ್ದರಿಂದ ಅದು ಯಾವಕಾಲಕ್ಕೂ ಅರ್ಥಪೂರ್ಣವಾಗಿ ಉಳಿಯುತ್ತದೆ.

## ಇಟಲಿಯ ವರ್ತಮಾನ ವಾಸ್ತವ – ಸೈಕಲ್ ಕಳ್ಳರು

ಬೈಸಿಕಲ್ ಥೀವ್ಸ್‌ನ ಕಥೆ ಸರಳವಾದದ್ದು :

ಯುದ್ಧಾನಂತರದ ದುರ್ದಿನಗಳು ಅವು. ಲಕ್ಷೋಪಲಕ್ಷಾದಿ ಜನ ನಿರುದ್ಯೋಗದ ದವಡೆಗೆ ಸಿಕ್ಕು ನರಳುತ್ತಿದ್ದಾರೆ. ಅಂಥವರಲ್ಲೊಬ್ಬ ಆಂಟೊನಿಯೊ. ಹೆಂಡತಿ ಮತ್ತು ಇಬ್ಬರು ಚಿಕ್ಕಮಕ್ಕಳ ಆತನ ಸಂಸಾರ ಹೀಗೆ ಗತಿಗೆಟ್ಟಿರುವಾಗ, ಅದೃಷ್ಟವಶಾತ್ ಆಕಸ್ಮಿಕವೆಂಬಂತೆ ಆತನಿಗೆ ಒಂದು ಕೆಲಸ ಸಿಕ್ಕುತ್ತದೆ. ಪೋಸ್ಟರ್‌ಗಳನ್ನು ಅಂಟಿಸುವ ಕೆಲಸ ಅದು. ಅದಕ್ಕೆ ಆತ ತನ್ನದೇ ಆದ ಒಂದು ಸೈಕಲ್ ಹೊಂದಿರಬೇಕು. ಎನ್ನುವುದು ನಿಯಮ. ಅದಕ್ಕಾಗಿ ಆಂಟೊನಿಯೊ ಮನೆಯಲ್ಲಿದ್ದ ಅಮೂಲ್ಯ ವಸ್ತುವನ್ನು ಮಾರಿ, ಅಡವಿಟ್ಟಿರುವ ತನ್ನ ಸೈಕಲ್ಲನ್ನು ಬಿಡಿಸಿ ತರುತ್ತಾನೆ, ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಮೊದಲನೆಯ ದಿನ ಆತ ಪೋಸ್ಟರ್ ಅಂಟಿಸುವುದರಲ್ಲಿ ನಿರತನಾಗಿರುವಾಗ, ಆತನ ಕಣ್ಣೆದುರೇ ಅವನ ಸೈಕಲ್ಲನ್ನು ಕದ್ದೊಯ್ಯುತ್ತಾರೆ. ಆತ ಬೆನ್ನಟ್ಟಿ ಹೋದರೂ ಕಳ್ಳ ಸಿಕ್ಕದೆ ತಪ್ಪಿಸಿಕೊಳ್ಳುತ್ತಾನೆ. ಮುಂದೆ, ಆಂಟೊನಿಯೊ ತನ್ನ ಏಳೆಂಟು ವರ್ಷದ ಬಾಲಕ ಬ್ರುನೊನ ಜೊತೆಯಲ್ಲಿ ಎರಡು ದಿನಗಳ ಕಾಲ ರೋಮ್ ನಗರದ ಎಲ್ಲ ಭಾಗಗಳಲ್ಲೂ ಹುಡುಕುತ್ತ ಅಲೆಯುತ್ತಾನೆ. ಒಮ್ಮೆ ಕಳ್ಳ ಸಿಕ್ಕರೂ ಅವನೇ ಕಳ್ಳನೆಂದು ಸಮರ್ಥಿಸಲು ಸಾಧ್ಯವಾಗದೆ ಕೈಬಿಡಬೇಕಾಗುತ್ತದೆ. ಈಗ ಆಂಟೊನಿಯೊ ದಿಗ್ಭ್ರಾಂತನಾಗುತ್ತಾನೆ. ಸಿಕ್ಕ ಕೆಲಸ ಕೈತಪ್ಪಿ ಮತ್ತೆ ಆತ ಗತಿಗೆಟ್ಟು ಅಲೆಯಬೇಕು ; ಹೆಂಡತಿ ಮಕ್ಕಳು ಹೊಟ್ಟೆಗಿಲ್ಲದೆ ಪಾಡುಪಡಬೇಕು. ಕರಾಳ ಭವಿಷ್ಯ ಕಣ್ಣೆದುರು ನಿಂತ ಹತಾಶೆಯ ಉದ್ವೇಗದ ಆ ಕ್ಷಣದಲ್ಲಿ ಆತ ದಿಕ್ಕು ಕಾಣದೆ ತಾನೂ ಒಂದು ಸೈಕಲ್ ಕದಿಯುತ್ತಾನೆ. ಆದರೆ ಅಚಾತುರ್ಯದಿಂದ ಸಿಕ್ಕಿಬಿದ್ದು

ಸಹಸ್ರಾರು ಜನರ ಎದುರು, ತನ್ನ ಪುಟ್ಟ ಮಗನ ಎದುರು ಅಸಹ್ಯವಾದ ಅವಮಾನಕ್ಕೆ ಗುರಿಯಾಗುತ್ತಾನೆ.

ಯುದ್ಧಾನಂತರದ ದಿನಗಳಲ್ಲಿ ಜನಸಾಮಾನ್ಯರ ಬದುಕು ದಾರುಣವಾದ ದಾರಿದ್ರ್ಯಕ್ಕೆ ಸಿಕ್ಕು, ಜನ ತಮ್ಮ ಮಾನವೀಯತೆಯನ್ನೇ ಬಲಿಗೊಟ್ಟು ಬದುಕಬೇಕಾಗುವಂಥ ಉತ್ಕಟಸ್ಥಿತಿಗೆ ತಲುಪಿರುವುದನ್ನು ಅನುಭವಗೊಳಿಸಿ ಕೊಡುತ್ತದೆ ಈ ಚಿತ್ರ.

ಚಿತ್ರದಲ್ಲಿ ಬುಡದಿಂದ ತುದಿಯತನಕ ನಾವು ವಿಶೇಷವಾಗಿ ಕಾಣುವುದು ಬೀದಿಯ ದೃಶ್ಯಗಳನ್ನೇ. ರೋಮ್ ನಗರದ ಹೊರವಲಯದ ಏರುತಗ್ಗುಗಳ ಹೊಂಡಗುದ್ದುಗಳ ಜಲ್ಲಿಯೆದ್ದು ಮುಳ್ಳುಮುಳ್ಳಾಗಿ ಕಾಣುವ ದೂಳುರಸ್ತೆಗಳು, ಒಳ ನಗರದ ವಿಶಾಲ ಡಾಮರು ರಸ್ತೆಗಳು, ಎಲ್ಲೆಂದರಲ್ಲಿ ಮುರಿದು ತಿರುಗಿಕೊಳ್ಳುವ ಓಣಿಗಲ್ಲಿಗಳು ; ಉದ್ದುದ್ದ, ಅಡ್ಡಡ್ಡ, ಕೂಡುವ, ಕವಲಾಗುವ, ಕತ್ತರಿಸುವ ಕೊನೆಯೇ ಇಲ್ಲದಂತೆ ಹಾಸಿ ಬಿದ್ದುಕೊಂಡಿರುವ ಹರಿದಾರಿ ರಸ್ತೆಗಳು. ಮುಂಜಾವಿನ ಮಬ್ಬು ಇನ್ನೂ ಹಬ್ಬಿರುವಾಗಲೇ ರಸ್ತೆಗಳನ್ನು ತುಂಬಿ ತುಳುಕುವ ಜನಜಂಗುಳಿ. ಇರುವೆಗಳ ಹಾಗೆ, ಮುತ್ತಿಕೊಂಡು ನಿಂತ ದಂಡುಗಟ್ಟಿ ನಡೆಯುವ ಅಸಂಖ್ಯಾತ ಜನಸಾಮಾನ್ಯರು. ಚಲಿಸುವ ಬಸ್‌ಗಳಲ್ಲಿ ಟ್ರಾಂಗಳಲ್ಲಿ ಕಿಕ್ಕಿರಿದು ತುಂಬಿ ರಸ್ತೆಫುಟ್‌ಪಾತ್‌ಗಳಿಗೆ ಚೆಲ್ಲಿಕೊಳ್ಳುವ ಜನಗಳು. ಮಾರ್ಕೆಟ್‌ಗಳಲ್ಲಿ ಚೌಕಗಳಲ್ಲಿ ಹೊಟ್ಟೆಪಾಡಿಗಾಗಿ ಹಾತೊರೆದು ಗಿಜಗಿಜಿಸುವ ಜನಸಂದಣಿ. ಮಳೆ ಬಂದರೆ ತೊಯ್ಯುತ್ತಲೇ ನಡೆಯುವ, ಇಲ್ಲವೆ ಸೂರು ಕವಿದ ಗೋಡೆಗಳಿಗೆ ಆತು ಮಳೆ ನಿಲ್ಲುವುದನ್ನೇ ಅಸಹನೆಯಿಂದ ಕಾಯುವ ಜನ. ಒಮ್ಮೊಮ್ಮೆ ರಸ್ತೆ ಬಿಟ್ಟು ಅಪಾರ್ಟ್‌ಮೆಂಟ್‌ಗೋ, ಕ್ಲಬ್‌ಗೋ, ಚರ್ಚ್‌ಗೋ ಬಂದಿತೆಂದರೆ ಅಲ್ಲೂ ಮತ್ತೆ ಅದೇ ಜನಜಂಗುಳಿ ; ಅಲ್ಲಿಂದ ಬೀದಿಗೆ ಬೀಳಲು ಕಾಲೆತ್ತಿಕೊಂಡೇ ಇದ್ದಾರೋ ಎನ್ನಿಸುವಂಥ ಜನಜಂಗುಳಿ. ನಗರರಸ್ತೆಗಳಲ್ಲಿ ನಾವು ಕಂಡಿರುವ ಕಾಣಬಹುದಾದ, ಅದೇ ರೀತಿಯ ಒಬ್ಬರಿಗೂ ಪ್ರತ್ಯೇಕ ಚಹರೆಯೇ ಇಲ್ಲವೇನೋ ಎನ್ನಿಸುವಂಥ, ಹೊಟ್ಟೆಪಾಡಿನ ದುಡಿಮೆಗಾಗಿ ಧಾವಂತ ಕೈಗೊಂಡಿರುವ ಜನ. ಈ ಜನಸಾಗರದ ಮಧ್ಯೆ ನಾಯಕ ಆಂಟೊನಿಯೊ, ಆತನ ಪತ್ನಿ ಮರಿಯಾ ಮತ್ತು ಆತನ ಸ್ನೇಹಿತರು — ಮುಂತಾಗಿ ಎಲ್ಲರೂ ಸಮವಸ್ತ್ರದನೆಯ್ಗೆಯಲ್ಲಿ ಹೊಂದಿಕೊಂಡ ಒಂದೇ ತೆರನ ನೂಲುಗಳಾಗಿ ಕಾಣಿಸುತ್ತಾರೆ.

ರಸ್ತೆ ತುಂಬಿದ ಜನಸಮ್ಮರ್ದದ ಇಂಥ ತೊಳಲಾಟದ ಹಿನ್ನೆಲೆಯಲ್ಲಿ, ರಸ್ತೆಬದಿಯ ಅಲಂಕಾರ ವಸ್ತುಗಳಾದ ಕಂಬಕಮಾನುಗಳ ಕಲ್ಲು ಕಟ್ಟಡಗಳಾಗಲಿ ಉಪಯೋಗ ವಾಸ್ತುಗಳಾದ ಸರಳರೇಖೆ ಚೌಕಗಳ ಕಾಂಕ್ರೀಟ್‌ಕಟ್ಟಡಗಳಾಗಲಿ ಮೃತ-ಕಠಿನವಾಗಿ ಕಾಣತೊಡಗುತ್ತವೆ.

ಈ ಚಿತ್ರದ ಮೇಲ್ಮೈಯಲ್ಲಿ ಕಾಣಿಸುವ ನೂರಕ್ಕೆನೂರು ಅಪ್ಪಟ ವಾಸ್ತವದ ಅಚ್ಚು ಅಪೂರ್ವವಾದ ಹೊಸತನವನ್ನು ಶಕ್ತಿಯನ್ನು ದೊರಕಿಸಿಕೊಟ್ಟಿದೆ. (ಚಿತ್ರೀಕರಣದಲ್ಲಿ ಇಂಥ ವಾಸ್ತವವನ್ನು ಸಾಧಿಸಿರುವುದಕ್ಕೆ ಅಪಾರ ಶ್ರಮವೂ, ಹಣವೂ ವ್ಯಯವಾಯಿತಂತೆ. ಚಿತ್ರದ ತುಂಬ ಬೀದಿಗಳ ಹಾಗೂ ಗುಂಪುಗಳ ದೃಶ್ಯಗಳೇ ಇರುವಾಗ, ನಿಜಸ್ಥಳಗಳಲ್ಲಿ, ಅಲ್ಲಿನ ವ್ಯವಹಾರಗಳನ್ನು ಬೇಕೆನ್ನುವ ಹಾಗೆ ನಿಯಂತ್ರಿಸಿಕೊಂಡು ಚಿತ್ರೀಕರಿಸಿಕೊಳ್ಳುವುದು ಎಷ್ಟು ದುಸ್ತರ ವಾಗಿರಬಹುದೆಂಬುದನ್ನು ನಾವು ಊಹಿಸಿಕೊಳ್ಳಬಹುದು. ಚಿತ್ರದ ನಾಯಕ ಆಂಟೊನಿಯೊ ಪಾತ್ರಕ್ಕೆ ಡಿ ಸಿಕಾ ಪ್ರಾರಂಭದಲ್ಲಿ ಪ್ರಸಿದ್ಧ ನಟನೊಬ್ಬನನ್ನ ಯೋಚಿಸಿಕೊಂಡಿದ್ದರೂ ಆಮೇಲೆ ಅದನ್ನು ಕೈಬಿಟ್ಟು ಸಾಮಾನ್ಯ ಕಾರ್ಮಿಕನೊಬ್ಬನನ್ನು ಆಯ್ದುಕೊಂಡ. 'ಸಾಮಾನ್ಯ ಕಾರ್ಮಿಕನಾಗಿದ್ದ ಲಾಂಬೈಟೊ ಮಗಿಯೊರನಿ ಎರಡು ತಿಂಗಳು ರಜೆ ಪಡೆದುಕೊಂಡು ನನ್ನ ಜತೆ ಅಷ್ಟು ಚೆನ್ನಾಗಿ ಬೆರೆತುಕೊಂಡು ದುಡಿದ. ಪ್ರಾರಂಭದಲ್ಲಿ ಕೆಲವೇದಿನ, ಸಹಜವಾಗಿ, ಕೊಂಚ ಹೆದರಿದಂತೆ ಕಂಡರೂ ಮುಂದೆ ಆತ ಆಂಟೊನಿಯೋನ ಪಾತ್ರವನ್ನು ಅಂಥ ಸತ್ಯ ಮತ್ತು ಸಹಜತೆಯಿಂದ ಬದುಕಿ ತೋರಿಸಿದ'—ಎನ್ನುತ್ತಾನೆ ಡಿ ಸಿಕಾ, ಆತನ ಬಗ್ಗೆ. ಮಗ ಬ್ರುನೋನ ಪಾತ್ರಕ್ಕೆ ಆಯ್ಕೆಯಾದ ಹುಡುಗ ಡಿ ಸಿಕಾನಿಗೆ ಅಕಸ್ಮಾತ್ ರಸ್ತೆಯಲ್ಲಿ ಸಿಕ್ಕಿದನಂತೆ. 'ಎನ್ಜೊ ಸ್ತಯೊಲನಂತ ಪ್ರೀತಿಪಾತ್ರ ಬಾಲಕರು ಜಗತ್ತಿನಲ್ಲೇ ವಿರಳ. ಆತನಲ್ಲಿರುವ ಗುಣಗಳಲ್ಲದೆ ಬ್ರುನೊನಂಥ ಪಾತ್ರವನ್ನು ಸೃಷ್ಟಿಸುವುದು ಅಸಾಧ್ಯ, ಆತ ಅಕಸ್ಮಾತ್ ನನಗೆ ಸಿಕ್ಕಿದ್ದು ನನ್ನ ಭಾಗ್ಯ' ಎಂದು ಆತನ ಬಗ್ಗೆ ಡಿ ಸಿಕಾ ಪ್ರೀತಿತುಂಬಿ ಹೊಗಳಿದ್ದಾನೆ. ಚಿತ್ರೀಕರಣದಲ್ಲಿ ನಿಜಸ್ಥಳಗಳನ್ನೇ ಆಯ್ದುಕೊಂಡಂತೆ ಡಿ ಸಿಕಾ ಪಾತ್ರಗಳಿಗೆ ನಿಜವ್ಯಕ್ತಿಗಳನ್ನೇ ಆಯ್ದುಕೊಂಡಿದ್ದಾನೆ.)

ಇಷ್ಟೆಲ್ಲ ಹಸಿ ವಾಸ್ತವತೆಯಿದ್ದರೂ ಈ ಚಿತ್ರದ ವಾಸ್ತವದ ಚಿತ್ರವರದಿಯಷ್ಟೇ ಆಗಿಬಿಡದೆ ಗಹನವಾದ ಅನುಭವ ಮೂಲವಾಗುವುದು, ಇದರ ಹಿಂದಿರುವ ಆಳವಾದ ಮಾನವೀಯ ಪ್ರೇಮದಿಂದ. ರಸ್ತೆಯ ಜನಸಂದಣಿಯಲ್ಲಿ ಪ್ರತ್ಯೇಕ ಚಹರೆಯೇ ಇಲ್ಲವೇನೋ ಎನ್ನುವಹಾಗೆ ಬೆರೆತುಹೋಗುವ ಆಂಟೊನಿಯೊನಂಥವನು ನಮ್ಮ ಆಸಕ್ತಿಯನ್ನು ಸೆಳೆದು, ನಮ್ಮೆದುರು ತನ್ನ ಬದುಕನ್ನು ತೆರೆದುಕೊಳ್ಳುವುದು ಇಂಥ ಗಾಢ ಪ್ರೀತಿ ಆಸಕ್ತಿಗಳಿಂದ ಮಾತ್ರವೇ ಸಾಧ್ಯವಾಗಿದೆ. ಬಡತನದ ಬವಣೆಯಲ್ಲಿ ಸಿಕ್ಕು ದಿಕ್ಕುಗೆಟ್ಟು ಮೂರ್ಖರಾಗುವ ಮೂಢರಾಗುವ ಹಗಲುಗನಸಿನ ಟೊಳ್ಳುಗಳಾಗುವ ಅನೀತಿವಂತರಾಗುವ ಅಪರಾಧಿಗಳಾಗುವ ಹಿಂಸ್ರರಾಗುವ ಈ ಜನರನ್ನು, ಭವಿಷ್ಯಕಾರ್ತಿಯ ಕೋಣೆಯ ಹುಸಿಯಲ್ಲಿ, ಕ್ಲಬ್‌ನ ರಾಜಕೀಯ ಸಭೆ ಮನೋರಂಜನೆಗಳ ಕಣ್ಣುಮುಚ್ಚಾಲೆಯಲ್ಲಿ, ಚರ್ಚ್‌ಸರ್ವಿಸ್‌ನ ಧಾರ್ಮಿಕ ಆಡಂಬರ ಢಂಬಗಳಲ್ಲಿ, ಸೂಳೆಗೇರಿಯ ಅನೈತಿಕ ಅಸಹ್ಯ ನಿರ್ಲಜ್ಜೆಯಲ್ಲಿ ಮುಂತಾಗಿ ಎಲ್ಲೆಂದರಲ್ಲಿ ಕಂಡು ಮರುಕ

ಪಡುತ್ತೇವೆ. ಕಚೇರಿಗಳಲ್ಲಿ, ಪೋಲಿಸ್ ಠಾಣೆಗಳಲ್ಲಿ ತುಂಬಿಕೊಂಡ ನಿರ್ಲಕ್ಷ್ಯದ ಅಧಿಕಾರಿಗಳು, ಚರ್ಚ್‌ನಲ್ಲಿ ಸೇವೆಸೌಜನ್ಯಗಳ ವೇಷತೊಟ್ಟು ಸದ್ದಿಲ್ಲದೆ ಹರಿದಾಡುವ ಶ್ರೀಮಂತ ಧಾಂಬಿಕರು ಮುಂತಾದ ಹಿಂಡು ಹಿಂಡನ್ನು ಕಂಡು ಕೆರಳುತ್ತೇವೆ. ಕಣ್ಣೆದುರಿನ ಘನವಾಸ್ತವದಲ್ಲಿ ಮನುಷ್ಯವ್ಯಾಪಾರಗಳ ಅದೃಶ್ಯಸಂಕೀರ್ಣವನ್ನು ಅರಿವುಗೊಳಿಸಿಕೊಳ್ಳುತ್ತ ಆಳಆಳಕ್ಕೆ ಇಳಿದುಕೊಳ್ಳುತ್ತೇವೆ.

ಚಿತ್ರದಲ್ಲಿ ಕಲ್ಪಿತವಾದ ಕಾರ್ಪಣ್ಯದ ಬದುಕು, ಮುಜುಗರದ ಮಾನವೀಯ ಸಂಬಂಧಗಳು—ಇವುಗಳ ನಡುವೆ ಬರುವ ಆಂಟೊನಿಯೊನ ಮಗ, ಎಂಟು ಹತ್ತು ವರ್ಷದ ಬಾಲಕ ಬ್ರುನೊನ ಪಾತ್ರ ಈ ಚಿತ್ರಕ್ಕೆ ಒಂದು ವಿಶೇಷ ಮಾರ್ದವವನ್ನು ತಂದುಕೊಟ್ಟಿರುವುದಷ್ಟೇ ಅಲ್ಲ, ಪ್ರೇಕ್ಷಕರ ದೃಷ್ಟಿಯನ್ನೇ ಅದು ಖಚಿತವಾಗಿ ನಿರ್ದೇಶಿಸುತ್ತದೆ. ಮಾನವೀಯತೆಯ ಕುಡಿಯೊಂದು ಈಗಷ್ಟೇ ಮೊಳಕೆಚಿಗುರಿ ಕಣ್ಣುಬಿಟ್ಟು ಕಂಪಿಸುತ್ತಿರುವುದರ ಎದುರಲ್ಲಿ ಸುತ್ತೂ ಪರಿಸರದ ಅಮಾನವೀಯತೆ ಮತ್ತೂ ಸ್ಪಷ್ಟ ಎದ್ದು ಕಾಣುತ್ತದೆ. ಇಷ್ಟೇ ಅಲ್ಲ, ಚಿತ್ರದ ದುರಂತ ಘಟನೆಗಳಲ್ಲಿ ಪಾಲುಗಾರನೂ ಅದಕ್ಕೆ ಸಾಕ್ಷಿಯೂ ಆಗುವ ಈ ಬಾಲಕ, ಇಡೀ ಅನುಭವವನ್ನು ಪ್ರೇಕ್ಷಕರಿಗೆ ಮಾನವೀಯ ಪ್ರೀತಿಯ ಹಸುಳೆಗಣ್ಣುಗಳಲ್ಲಿ ಕಾಣಿಸಿಕೊಡುತ್ತಾನೆ.

ಬ್ರುನೊ ತಂದೆಯ ಜತೆ ಸರೀಕನಂತೆ ನಡೆದುಕೊಳ್ಳುವುದು ಆಸ್ತಿಯ ಆಲಂಬನೆಯಿಲ್ಲದ ಶ್ರಮಿಕವರ್ಗದಲ್ಲಿ ಸಹಜವಾಗಿ ಕಾಣಿಸುವಂಥದು, ತಂದೆಮಕ್ಕಳ ಇಂಥ ಸರೀಕ ಸಂಬಧ ಎಷ್ಟು ಅಪೇಕ್ಷಣೀಯ ಎನ್ನಿಸುವುದರ ಜೊತೆಗೆ, ಬದುಕಿನ ಒತ್ತಡ ಆ ಬಾಲಕನ ಶೈಶವವನ್ನೇ ಹಿಸುಕಿ ಹಾಕಿದ್ದರಿಂದ ಇಂಥ ಸಂಬಂಧ ಸಾಧ್ಯವಾಯಿತೇನೋ ಎನ್ನಿಸುವ ಖೇದವೂ ಉಂಟಾಗುತ್ತದೆ. ಮುಂದೆ ಹುಡುಕಾಟದಲ್ಲಿ, ಆತ ದಿನಬೆಳಗಾಗುವುದರೊಳಗೆ 'ಹಿರಿಯ'ನಾಗಿ ಮಾಗಿಬಿಡುತ್ತಾನಲ್ಲ, ಈ ವಿಲಕ್ಷಣ ಪರಿವರ್ತನೆಯಲ್ಲಿ ಸೂಕ್ಷ್ಮವಾಗಿ ವ್ಯಕ್ತವಾಗುವ ದುರಂತ ನಮ್ಮನ್ನು ಆಳವಾಗಿ ಕಲಕಿಬಿಡುತ್ತದೆ. ಅಂತಿಮ ದೃಶ್ಯದಲ್ಲಿ, ಸೋತು ಸತ್ತಂತೆ ಶೂನ್ಯದೃಷ್ಟಿಯಿಂದ ಹೆಜ್ಜೆ ಹಾಕುತ್ತ ನಡೆದ ತಂದೆಗೆ ಈತನೇ ಕೈ ಚಾಚುತ್ತಾನೆ ; ಆಂಟೊನಿಯೊ ಏನು ಮಾಡುವುದೆಂದು ತಿಳಿಯದೆ ಅಂತಿಮವಾಗಿ, ಮಗನ ಕೈಯನ್ನು ಏಕೈಕ ಅವಲಂಬನೆಯೆಂಬಂತೆ ಗಟ್ಟಿಯಾಗಿ ಅಮುಕಿ ಹಿಡಿದುಕೊಳ್ಳುತ್ತಾನೆ.. ದುರಂತದ ಕತ್ತಲಲ್ಲಿ ಎಲ್ಲ ದಾರಿಗಳೂ ಮುಚ್ಚಿತೆನ್ನುವಾಗ ಮಾನವೀಯತೆಯ ಹಸುಳೆ ಹಸ್ತ ಹೊಸ ಆಲಂಬನವಾಗಿ ಕೈಗೆಟಕುತ್ತದೆ.

ಚಿತ್ರವನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಆಂಟೊನಿಯೊ ಕೆಲಸ ಪಡೆದು ಸೈಕಲ್ ದೊರಕಿಸಿಕೊಂಡು ಕೆಲಸಕ್ಕೆ ಹಾಜರಾಗುವಷ್ಟಕ್ಕೆ ಮೊದಲ ಭಾಗ ಮೀಸಲೆನ್ನುವಂತಿದೆ. ಸೈಕಲ್ ಕಳುವು ಈ ಭಾಗದ ತುದಿತುದಿಯಲ್ಲಿ ತಟಕ್ಕನೆ ಆಗಿ

ಹೋಗುತ್ತದೆ. ಅನಂತರದ ಎರಡು ಭಾಗಗಳ ತುಂಬ ಆತನ ಹುಡುಕಾಟವೇ ನಡೆದು ತೀರ ತುದಿಯಲ್ಲಿ ಪುನಃ ಆತನೇ ಮತ್ತೊಂದು ಸೈಕಲ್ ಕದ್ದು ಸಿಕ್ಕಿಬೀಳುವ ಘಟನೆ ಕ್ಷಣಮಾತ್ರದಲ್ಲಿ ನಡೆದು ಹೋಗುತ್ತದೆ.

೧. ಕೆಲಸ ಸಿಕ್ಕಿ ಸೈಕಲ್ ದೊರಕಿಸಿಕೊಂಡು ಕೆಲಸಕ್ಕೆ ಹಾಜರಾಗುವ ದೀರ್ಘ ಕ್ರಿಯಾ ಪರಂಪರೆ, ತಟ್ಟನೆ ಸೈಕಲ್ ಕಳುವು, ಮುಂಗಾಣದ ಸ್ಥಿತಿ, ಕ್ಲಬ್‌ನಲ್ಲಿ ಕಾಣುವ ಹುಸಿ ಖುಶಿ ;

೨. ಸುದೀರ್ಘವಾದ ವಿಫಲ ಹುಡುಕಾಟ, ತಂದೆಮಕ್ಕಳ ನಡುವೆ ಬಿಸಿ, ಮಗನ ಸಾವಿನ ಸಂಶಯದ ಆಘಾತ, ಅಂತಿಮವಾಗಿ ರೆಸ್ಟುರಾದಲ್ಲಿ ಹಗಲುಗನಸಿನ ಹುಸಿನೆಮ್ಮದಿಯ ಕ್ಷಣಮಿಂಚು ;

೩. ಪವಾಡದ ಭ್ರಮೆ ಕಳೆದು ಮತ್ತೆ ಎದ್ದ ಮರುಹುಡುಕಾಟ, ಹಿಂಸೆ ಹತಾಶೆ, ಮಿಂಚುಕಳುವು, ಕದ್ದು ಸಿಕ್ಕಿದ ಸೈಕಲ್ ದಕ್ಕದೆ ಅವಮಾನ ಕತ್ತಲೆಗಳು ಕವಿದುಕೊಳ್ಳುವ ದುರಂತ, ಅಂತಿಮವಾಗಿ ತಂದೆಗೆ ಸಿಗುವ, ಅಮೂರ್ತವಾದರೂ ಹುಸಿಯಲ್ಲದ, ಮಗನ ಕೈಯ ಆಲಂಬನ ಕಿರಣ — ಇದು ಸ್ಥೂಲ ಸಂವಿಧಾನ.

ಚಿತ್ರದ ಮೂಲ ಅನುಭವದ ಲಯವೇ ಇಲ್ಲಿನ ಸಂವಿಧಾನದ ಲಯವನ್ನು ರೂಪಿಸಿರುವುದನ್ನು ಕಾಣಬಹುದು. ಎಂದರೆ—ಪ್ರಸ್ತುತ ಸಾಮಾಜಿಕ ವ್ಯವಸ್ಥೆಯನ್ನು ಪರಿಭಾಸಿವಿಕೊಂಡು ವರ್ತಮಾನದ ಯಥಾ ವಾಸ್ತವವನ್ನು ಮಾನವೀಯ ದೃಷ್ಟಿಯಿಂದ ಕಾಣಬೇಕು ಎಂಬ ಸಂಕಲ್ಪವಿಟ್ಟುಕೊಂಡ ದೃಷ್ಟಿಕೇಂದ್ರಕ್ಕೆ ಇಡೀ ಘಟನೆ ಯಾವ ಲಯದಲ್ಲಿ ಪ್ರತ್ಯಕ್ಷಗೊಳ್ಳುತ್ತದೋ ಅದೇ ಲಯ ಸಂವಿಧಾನದ ಲಯದಲ್ಲಿ ವ್ಯಕ್ತಗೊಳ್ಳುತ್ತದೆ.

ಸ್ಟುಡಿಯೊದ ಕಲ್ಪಿತ ದೃಶ್ಯಗಳು, ಪರಿಣತ ನಟರು, ಚಿತ್ರಚಮತ್ಕಾರಗಳು ಮುಂತಾದುವನ್ನು ನಿರಾಕರಿಸಿ ನಿಜಸ್ಥಳದಲ್ಲೇ ನಿಜವ್ಯಕ್ತಿಗಳನ್ನು ಬಳಸಿಕೊಂಡು ಅತ್ಯಂತ ಸಹಜವಾಗಿ ವಾಸ್ತವವಾಗಿ ಸರಳವಾಗಿ ಚಿತ್ರೀಕರಣ ಮಾಡಿಕೊಂಡಿರುವುದು ; ಕಥೆಯನ್ನು ಪೂರ್ತಾ ಕೈಬಿಟ್ಟು ವ್ಯಕ್ತಿಯ ಒಳತೋಟಿಯನ್ನೇ ಕುರಿತ ಅಮೂರ್ತ ಮನೋವ್ಯಾಪಾರದ ಚಿತ್ರಣವೊ ಅಥವಾ ಬರೀ ಕಥೆಯನ್ನೇ ಆಧರಿಸಿದ ಬಹಿರ್ವ್ಯಾಪಾರಗಳ ಕುತೂಹಲಕಾರಿ ವೃತ್ತಾಂತವೊ ಆಗದಂತೆ, ಸಮಾಜಜೀವಿಯಾದ ಒಬ್ಬ ವ್ಯಕ್ತಿ ಸಮಾಜದ ಮಧ್ಯದಲ್ಲಿದ್ದು ಅನುಭವಿಸುವ, ಸಹಜ ಭೌತಿಕ-ಮಾನಸಿಕ ಕೋಟಲೆಗಳನ್ನು ಅತ್ಯಂತ ಕಾಳಜಿಯಿಂದ ಕಾಣಿಸಿಕೊಡುವಂತೆ ಕಥೆಯ ಹದವನ್ನು ಸಾಧಿಸಿರುವುದು ; ವ್ಯಕ್ತಿಯನ್ನು ಸದಾ ಗುಂಪಿನ ಮಧ್ಯದಲ್ಲೇ ಪರಿಶೀಲಿಸುತ್ತ

ಹೋಗುವುದು (ಅಂಟೊನಿಯೊನ ಹಗಲುಗನಸುಕೂಡ ಜನಜಂಗುಳಿಯಿರುವ ರೆಸ್ಟು ರಾದಲ್ಲೆ ಗರಿಯೊಡೆದುಕೊಳ್ಳುತ್ತದೆ) ; ಮಾನವೀಯ ಅನುಕಂಪ ದೃಷ್ಟಿಯನ್ನು ಪ್ರತಿನಿಧಿಸುವಂತೆ ಚಿತ್ರದ ಬಹುಭಾಗವನ್ನು ಬ್ರುನೊನ ಹಸುಳೆಗಣ್ಣುಗಳ ಮೂಲಕ ಕಾಣಿಸುವುದು — ಈ ಎಲ್ಲವೂ ವಸು–ರೂಪಗಳ ಅಪರೂಪದ ಸಮನ್ವಯವನ್ನು ಸಾಧಿಸಿಕೊಟ್ಟಿವೆ. ವಸ್ತು–ರೂಪಗಳ ನಡುವೆ ಅಂಥ ಸಾಮರಸ್ಯ ಸಾಧಿತವಾಗಿರುವುದ ರಿಂದ ಈ ಕೃತಿ ಅಪರೂಪದ ಕೃತಿಯಾಗಿದೆ, ಹಾಗೂ ವಸ್ತು–ರೂಪಗಳೆರಡರ ದೃಷ್ಟಿ ಯಿಂದಲೂ ಇದು ನಿಯೊ ರಿಯಲಿಸಮ್ ಪಂಥದ ಅತ್ಯುನ್ನತ ಸಾಧನೆಯಾಗಿ ನಿಂತಿದೆ.

ಚಿತ್ರದ ದುರ್ಬಲತೆಯನ್ನು ಕುರಿತೂ ಒಂದು ಮಾತು ಸೂಚಿಸಬೇಕು. ಅದು ಈ ಚಿತ್ರದ ದುರ್ಬಲತೆ ಮಾತ್ರವಲ್ಲ, ಒಟ್ಟನಲ್ಲಿ ನಿಯೊರಿಯಲಿಸಮ್ ಪಂಥದ ದುರ್ಬಲತೆಯೇ ಆಗಿದೆ. ಚಿತ್ರದ ಅನುಭವದ ಬಹುಭಾಗ ಬ್ರುನೊನ ಹಸುಳೆಗಣ್ಣು ಗಳ ಮೂಲಕ ಕಾಣಿಸುವುದಾಗಿ ಅದಕ್ಕೆ ಮಾನವಾನುಕಂಪದ ಎಲ್ಲೆಯನ್ನು ಮೀರುವುದು ಸಾಧ್ಯವಾಗುವುದಿಲ್ಲ. ಮತ್ತು ಪರಿಸರ ಕಲುಷಿತವಾಗಿರುವುದಕ್ಕೆ ಹಿನ್ನೆಲೆಯಲ್ಲಿರುವ ಕಾರಣಗಳನ್ನು ನೇರ ಮುಖಾಮುಖಿಯಾಗಿ ಎದುರಿಸುವ ಛಲ ಮತ್ತು ಥಾಕತ್ತು ಇಲ್ಲಿ ಅಷ್ಟಾಗಿ ಕಾಣಿಸದೆ ಹೋಗುತ್ತದೆ. ಈ ಕಾರಣದಿಂದ ಚಿತ್ರ, ಪ್ರಜ್ಞೆಯ ಅಥವಾ ಪರಿಸರದ ಆಳವನ್ನು ತಳಮುಟ್ಟಿ ಶೋಧಿಸದೆ ಉಳಿದು ಬಿಡು ತ್ತದೆ. (MIRACLE IN MILAN ಚಿತ್ರದಲ್ಲಿ ವ್ಯಕ್ತವಾದ ಈ ನೆಲದಿಂದ ಪಲಾಯನ ಮಾಡುವುದೊಂದೇ ಪರಿಹಾರವೆನ್ನುವ ಸೂಚನೆ, ಈ ದೃಷ್ಟಿದೌರ್ಬಲ್ಯಕ್ಕೆ ಒಳ್ಳೇ ಉದಾಹರಣೆಯೆನ್ನಬಹುದು.) ಫೆಲಿನಿಯ ಹಾಗೂ ಬುನುಯೆಲ್‌ನ ಒಳ್ಳೆಯ ಚಿತ್ರಗಳ ಜತೆ ಈ ಚಿತ್ರವನ್ನು ಹೋಲಿಸಿ ನೋಡಿ ಮೇಲಿನ ಮಾತುಗಳನ್ನು ಮನವರಿಕೆಮಾಡಿಕೊಳ್ಳಬಹುದು.

* * *

ಚಿತ್ರದ ಬಗ್ಗೆ ಹೇಳಿರುವ ಮೇಲಿನ ಕೆಲವು ಮಾತುಗಳು ಅದರ ಬಗ್ಗೆ ಯೋಚಿ ಸಲು ಒದಗಿಸಿರುವ ಟಿಪ್ಪಣಿಗಳೆಂದು ಭಾವಿಸಬೇಕು ; ಮತ್ತು, ಚಿತ್ರ ಧ್ವನಿ ಚಲನೆ ಸಂಕಲನ ಮುಂತಾದ ಅಂಗಗಳಿಂದ ಸಿದ್ಧವಾಗುವ ಒಂದು ಸಮಗ್ರರೂಪದಲ್ಲಿ ಚಿತ್ರದ ವಸ್ತು ಹೇಗೆ ಪ್ರಕಟಗೊಂಡಿದೆ ಎನ್ನುವುದನ್ನು ಒಂದೊಂದೂ ಅಂಗದ ವಿವರ ವಿಶ್ಲೇಷಣೆಯೊಡನೆ ವಿಮರ್ಶೆ ಮಾಡಿಕೊಳ್ಳಬೇಕು — ಎನ್ನುವುದನ್ನು ಇಲ್ಲಿ ಸೂಚಿಸ ಬಯಸುತ್ತೇನೆ.

'ಬೈಸಿಕಲ್ ಥೀವ್ಸ್' ಜಗತ್ತಿನ ಚಲನ ಚಿತ್ರದ ಇತಿಹಾಸಕ್ಕೇ ಒಂದು ಚಿಕ್ಕ ತಿರುವು ತಂದುಕೊಟ್ಟಿತು, ಬೇರೆ ಬೇರೆ ದೇಶಗಳ ಅನೇಕ ನಿರ್ದೇಶಕರು ಈ ಚಿತ್ರದಿಂದ ನೇರ ಪ್ರಭಾವಿತರಾಗಿದ್ದಾರೆ. ಸತ್ಯಜಿತ್‌ರಾಯ್, ಈ ಚಿತ್ರ ತಮ್ಮ ಮೇಲೆ ಗಾಢ

ಪರಿಣಾಮ ಬೀರಿದೆಯೆಂದು ಹೇಳಿಕೊಂಡಿದ್ದಾರೆ. ಡಿ ಸಿಕಾನ 'ಉಂಬ್ರೆಟೊ-ಡಿ', ಆ ಕಾಲಕ್ಕೆ ಅದೇ ಸಮಸ್ಯೆಯನ್ನೆದುರಿಸುತ್ತಿದ್ದ ಇಂಗ್ಲೆಂಡ್‌ನಲ್ಲಿ ವಿಶೇಷ ಮೆಚ್ಚುಗೆ ಗಳಿಸಿತಂತೆ. ಹಾಗೇ, ಬಡತನದ ಸಮಸ್ಯೆ ಗಾಢವಾಗಿರುವ ನಮ್ಮ ದೇಶದಲ್ಲಿ ಈ ಚಿತ್ರ ಹೆಚ್ಚಿನ ಮೆಚ್ಚಿಕೆ ಗಳಿಸಿಕೊಳ್ಳುವುದು ಸಹಜವಾಗಿದೆ.

**ಮುಂದೆ ಬಳಕೆಯಾದ ಕೆಲವು ಪಾರಿಭಾಷಿಕ ಪದಗಳು :**

ಅತಿದೂರ ಚಿತ್ರ (EXTREME LONG SHOT) ಕೆಮೆರಾದಿಂದ ಅತಿದೂರ ವಿರುವ ಅಥವಾ ದೂರವಿರುವ ಹಾಗೆ ಭಾಸ ಹುಟ್ಟಿಸುವ ಚಿತ್ರಿಕೆ; ದೂರ ಚಿತ್ರಿಕೆಗಿಂತ ಹೆಚ್ಚು ದೂರದ್ದು.

ಅತಿ ಸಮೀಪ ಚಿತ್ರ (EXTREME CLOSEUP) : ಸಮೀಪ ಚಿತ್ರಕ್ಕಿಂತಲೂ ಹೆಚ್ಚು ಸಮೀಪವಾಗಿ ಚಿತ್ರೀಕರಿಸಿಕೊಂಡ ಚಿತ್ರಿಕೆ; ಉದಾ-ಸಮೀಪ ಚಿತ್ರದಲ್ಲಿ ಮನುಷ್ಯನ ಮುಖವಷ್ಟೇ ಕಾಣುವುದಾದರೆ ಇಲ್ಲಿ ಒಂದು ಕಣ್ಣಷ್ಟೇ ಕಾಣಿಸಬಹುದು.

ಅನುಸರಣ ಚಿತ್ರಿಕೆ (DOLLY SHOT) : ಕೆಮೆರಾವನ್ನು ವಾಹನದ ಮೇಲಿಟ್ಟು ಕೊಂಡು ಅದು ವಸ್ತು ಚಲನೆಯನ್ನು ಅನುಸರಿಸುತ್ತ ಹೋಗುತ್ತಿರು ವಂತೆ ತೆಗೆದುಕೊಂಡ ಚಿತ್ರಿಕೆ.

ಕೆಳಕೋನ/ಮೇಲು ಮುಖ (LOW ANGLE) : ಕೆಮೆರಾ ಕೆಳಮಟ್ಟದಿಂದ ಮೇಲ್ಮುಖವಾಗಿ ನೋಡಿ ಗ್ರಹಿಸಿಕೊಂಡ ಚಿತ್ರಿಕೆ.

ಕೋನ (ANGLE) : ವಸ್ತುವಿಗೆ ಸಂಬಂಧಿಸಿ, ಕೆಮೆರಾ ನೋಡುವ ಕೋನ.

ಕ್ಷಯ ವರ್ಧನ/ಕ್ಷಯ ವೃದ್ಧಿ (DISSOLVE) : ಒಂದು ದೃಶ್ಯ ಕ್ಷಯಿಸುತ್ತ ಹೋಗಿ ಇನ್ನೊಂದು ದೃಶ್ಯ ವೃದ್ಧಿಸುತ್ತ ಬರುವ ಕ್ರಮ.

ಕ್ಷೀಣನ/ಕ್ಷಯಿಸುವುದು (FADE OUT) : ಸ್ಪಷ್ಟವಿದ್ದ ಚಿತ್ರ ಕ್ರಮೇಣ ಮಸಕಾಗುತ್ತ ಕತ್ತಲಲ್ಲಿ ಕರಗಿಕೊಳ್ಳುವುದು.

ಚಿತ್ರಿಕೆ (SHOT) : ಕೆಮೆರಾ ಒಮ್ಮೆ ಚಾಲನೆಗೊಳಿಸಿ ನಿಲ್ಲಿಸುವತನಕ ಚಿತ್ರೀಕೃತ ವಾಗುವ ಒಂದು ಚಿತ್ರ ಖಂಡ; ಹ್ರಸ್ವ ದೃಶ್ಯ.

ಚೌಕ/ಚೌಕಟ್ಟು (FRAME) : ಚಿತ್ರಪಟ್ಟಿಯಲ್ಲಿರುವ ಚಿತ್ರದ ಒಂದು ಚೌಕಟ್ಟು.

ದೂರಚಿತ್ರ (LONG SHOT) : ದೂರದಿಂದ ಇಡೀ ದೃಶ್ಯ ಕಾಣುವಂತೆ, ಮನುಷ್ಯಗಾತ್ರಕ್ಕೆ ಸಂಬಂಧಿಸಿ ಹೇಳುವುದಾದರೆ ಆತನ ಇಡೀ ಗಾತ್ರ ಹಿನ್ನೆಲೆ ಕಾಣುವಷ್ಟು ದೂರದಿಂದ, ತೆಗೆದುಕೊಂಡ ಚಿತ್ರಿಕೆ.

ಪ್ರಶಸ್ತಿ ಶೀರ್ಷಿಕೆ (CREDIT TITLE) : ಚಿತ್ರದ ನಿರ್ಮಾಣದಲ್ಲಿ ದುಡಿದ ಕಲಾವಿದರ ಹೆಸರುಗಳನ್ನು ಪಟ್ಟಿ ಮಾಡಿಕೊಡುವ ಶೀರ್ಷಿಕೆಗಳು.

ಮಧ್ಯಚಿತ್ರ/ಮಧ್ಯಮಚಿತ್ರ (MID SHOT) : ದೂರಚಿತ್ರ ಸಮೀಪ ಚಿತ್ರಗಳಿಗೆ ಮಧ್ಯದ್ದೆನಿಸುವ ಅಂತರದಿಂದ ತೆಗೆದುಕೊಂಡ ಚಿತ್ರಿಕೆ ; ಮನುಷ್ಯ ಗಾತ್ರಕ್ಕೆ ಸಂಧಿಂಬಸಿ, ತಲೆಯಿಂದ ಮೊಣಕಾಲು ತನಕ ಸುಮಾರು ಕಾಣಿಸುವಂಥದು.

ಮಧ್ಯದೂರ ಚಿತ್ರ/ದೂರಮಧ್ಯಮ ಚಿತ್ರ (MID LONG SHOT) : ದೂರ ಚಿತ್ರಕ್ಕೂ ಮಧ್ಯಚಿತ್ರಕ್ಕೂ ಮಧ್ಯೆ ಎನ್ನಿಸುವ ಅಂತರದಿಂದ ತೆಗೆದು ಕೊಂಡ ಚಿತ್ರಿಕೆ.

ಮೇಲುಕೋನ/ಕೆಳಮುಖ (HIGH ANGLE) : ಕೆಮರಾ, ಮೇಲು ಮಟ್ಟ ದಿಂದ ಕೆಳಕ್ಕೆ ಬಾಗಿ ಚಿತ್ರೀಕರಿಸಿಕೊಂಡ ಚಿತ್ರ.

ಲಾಳ (PAN) : ನಿಂತಿರುವಲ್ಲೇ ಕೆಮರಾ ಮುಖವನ್ನು ಅಡ್ಡಡ್ಡ (ಎಡಬಲಕ್ಕೆ) ಲಾಳಾಕಾರ ತಿರುಗಿಸಿ ಗ್ರಹಿಸಿಕೊಂಡ ಚಿತ್ರಿಕೆ.

ವರ್ಧನ/ವರ್ಧಿಸುವುದು (FADE IN) : ಕತ್ತಲಿನಿಂದ ಕ್ರಮೇಣ ಚಿತ್ರ ಸ್ಫುಟವಾಗಿ ಮೂಡಿಕೊಳ್ಳುತ್ತ ಬರುವುದು. ಕ್ಷೀಣನಕ್ಕೆ ವಿರುದ್ಧ.

ವಸ್ತುಸಂಗೀತ (THEME MUSIC) : ಚಿತ್ರದ ಮುಖ್ಯಾಂಶಕ್ಕೆ ಸಂಕೇತವಾಗಿ ಚಿತ್ರದಲ್ಲಿ ಬರುವ, ಮರುಕೊಳಿಸುವ ಸಂಗೀತ ಖಂಡ.

ಸಮೀಪ ಚಿತ್ರ (CLOSE UP/CLOSE SHOT) : ವಸ್ತುವಿಗೆ ತೀರ ಹತ್ತಿರ ದಿಂದ ತೆಗೆದುಕೊಂಡಂತಿರುವ ಚಿತ್ರ. ಮನುಷ್ಯಾಕೃತಿಗೆ ಸಂಬಂಧಿಸಿ, ಮನುಷ್ಯನ ಮುಖವಷ್ಟೇ ಕಾಣಿಸುವಂಥ ಚಿತ್ರ.

ಸಮೀಪಮಧ್ಯಚಿತ್ರ/ಮಧ್ಯಸಮೀಪಚಿತ್ರ (CLOSE MID SHOT) : ಸಮೀಪ ಚಿತ್ರಕ್ಕೂ ಮಧ್ಯಮ ಚಿತ್ರಕ್ಕೂ ಮಧ್ಯದ ಅಂತರದಿಂದ ತೆಗೆದು ಕೊಂಡಂತೆ ಕಾಣಿಸುವ ಚಿತ್ರ.

ಹೊರಗೆ/ಹೊರಗಿಂದ (OFF) : ಕಾಣುತ್ತಿರುವ ದೃಶ್ಯದ ಆಚೆ, ಹೊರಗಿನಿಂದ ಬರುತ್ತಿದೆಯೆಂಬಂತೆ ಕೇಳಿಸುವ ಧ್ವನಿ, ಶಬ್ದ.

——

## ಲಾಡ್ರಿ ಡಿ ಬೈಸಿಕ್ಲೆಟ್ಟೆ

### (ಬೈಸಿಕಲ್ ಥೀವ್ಸ್ — ಸೈಕಲ್ ಕಳ್ಳರು)

ಇಟಲಿ / ೧೯೪೮ / ಕಪ್ಪು ಬಿಳುಪು / ೯೦ ನಿಮಿಷ

ಮೂಲಕಥೆಯ ಲೇಖಕ : ಲುಯಿಗಿ ಬಾರ್ಟೊಲಿನಿ

ಅಳವಡಿಸಿದಾತ : ಸೆಸರೆ ಜವೆಟ್ಟಿನಿ

ಚಿತ್ರಗ್ರಹಣ : ಕಾರ್ಲೊ ಮಾಂಟು ಓರಿ

ಸಂಗೀತ : ಅಲೆಸ್ಸಾಂಡ್ರೆ ಸಿಕೊಗ್ನಿನಿ

ನಿರ್ಮಾಪಕ : ಉಂಬ್ರೆಟೊ ಸ್ಕಾರ್ ಪೆಲ್ಲಿ

ಪಾತ್ರಗಳು : ಆಂಟೊನಿಯೊ ರಿಚಿ, ಬ್ರುನೊ ರಿಚಿ, ಮರಿಯಾ ರಿಚಿ ಇತ್ಯಾದಿ.

ನಿರ್ದೇಶನ : ವಿಟ್ಟೊರಿಯೊ ಡಿ ಸಿಕಾ

## ಭಾಗ ಒಂದು

ಮೊದಲ ಚಿತ್ರಿಕೆಯ ಮೇಲೆ ಪ್ರಶಸ್ತಿ ಶೀರ್ಷಿಕೆಗಳು ಒಂದಾದಮೇಲೊಂದು ಮೂಡಿ ಹೋಗುತ್ತದೆ. ಚಿತ್ರದ ಪ್ರಾರಂಭದಲ್ಲಿ ನಾವು ಕಾಣುವ ಸನ್ನಿವೇಶ ರೋಮ್ ನಗರದ ಹೊರವಲಯದ್ದು. ಒರಟೊರಟಾಗಿ ಕಣ್ಣಿಗೆ ಕಟುವಾಗಿ ಬಡಿಯುವ ಆಧುನಿಕ ವಾಸ್ತುವುಳ್ಳ ಸರ್ಕಾರಿ ಗೃಹಗಳಿರುವ ಒಂದು ಹೊರವಿಸ್ತರಣ. ಕಾರ್ಮಿಕ ವರ್ಗದ ವಸತಿಗೆ ಕಟ್ಟಿದ ಗೃಹಗಳು ಇವು. ಕಾಲ ಸುಮಾರು ೧೯೪೬. *

ಹಿನ್ನೆಲೆಯಲ್ಲಿ ಭಾವವನ್ನು ಉಕ್ಕಿಸುವ ವಾದ್ಯಗೋಷ್ಠಿಯ ವಸ್ತುಸಂಗೀತ. ಈ ವಸ್ತುಸಂಗೀತ (Theme Music) ಚಿತ್ರದುದ್ದಕ್ಕೂ ಅನೇಕ ನಾಟಕೀಯ ಸನ್ನಿವೇಶಗಳಲ್ಲಿ ಮರುಕೊಳಿಸುತ್ತಿರುತ್ತದೆ.

ಅನೇಕ ಅಂತಸ್ತುಗಳ ಉಪ್ಪರಿಗೆ ಮನೆಗಳ ಬೇಸರ ತರಿಸುವ ಸಾಲುಸಾಲು. ಈ ರಸ್ತೆಯಲ್ಲಿ ಜನರಿಂದ ತುಂಬಿ ತುಳುಕುತ್ತಿರುವ ಒಂದು ಬಸ್, ಕೆಮೆರಾ ಕಡೆಗೆ ಬರುತ್ತಿದೆ. ಸುಡುವ ಬಿಸಿಲಿನ ಸೆಕೆಗಾಲ, ದೂಳಿನ ರಸ್ತೆ, ದೂಳೆಬ್ಬಿಸುತ್ತ ಬಂದು ಬಸ್ಸಿನಿಂದ ಕಿಕ್ಕಿರಿದ ಜನ ಇಳಿಯುತ್ತಾರೆ. ಬಸ್ಸಿನಿಂದಿಳಿದ ಒಂದು ಗುಂಪು ಒಂದು ಚಿಕ್ಕ ಬಯಲನ್ನು ದಾಟಿ ಭಾರೀ ಗೋಡೆಗಳ ಮನೆಯೊಂದರತ್ತ ಹೋಗುವುದನ್ನು ಕೆಮೆರಾ ಲಾಳ ತಿರುಗಿ (Pan) ತೋರಿಸುತ್ತದೆ. ಅದು ಒಂದು ಉದ್ಯೋಗ ವಿನಿಮಯ ಕಛೇರಿ. ಒಂದು ಗುಂಪು ಕಛೇರಿಯ ಮೆಟ್ಟಲಿನಲ್ಲಿ ಮೇಲಕ್ಕೆನುಗ್ಗಿ ಕೆಳಗಿಳಿಯುತ್ತದೆ. ಕೆಳಗಿಳಿದು ಆಸಹನೆಯಿಂದ ಕಾಯುತ್ತ ನಿಂತಿದೆ. ಕಛೇರಿಯೊಳಗಿಂದ ಒಬ್ಬ ಅಧಿಕಾರಿ ಒಂದು ಕೈಯಲ್ಲಿ ದಾಖಲೆ ಪತ್ರಗಳನ್ನೂ ಇನ್ನೊಂದು ಕೈಯಲ್ಲಿ ಸಿಗಾರನ್ನೂ ಹಿಡಿದು ಹೊರಬಂದು ಗುಂಪಿಗೆ ಮುಖಮಾಡಿ ನಿಲ್ಲುತ್ತಾನೆ.

---

* — ಸೂಚನೆ : ಚಿತ್ರದ ದೃಶ್ಯಭಾಗಗಳಿಗೆ ಹೊಂದಿಕೊಂಡು ಬರುವ ಧ್ವನಿ ಭಾಗಗಳನ್ನು ಕೊಂಚ ಜಾಗಬಿಟ್ಟು, ಬಲಭಾಗದಲ್ಲಿ ನಮೂದಿಸುತ್ತ ಹೋಗಿದೆ.

ಅಧಿಕಾರಿ : (ಎತ್ತರದ ಧ್ವನಿಯಲ್ಲಿ) ರಿಚಿ.... ರಿಚಿ....
ಎಲ್ಲಿದ್ದಾನೆ ರಿಚಿ ?

ಗುಂಪಿನಿಂದ ಒಬ್ಬ ಮನುಷ್ಯ ಪ್ರತಿಕ್ರಿಯೆ ತೋರಿಸುತ್ತಾನೆ. ಅವನು ಆ ಗುಂಪಿನಲ್ಲಿ ರಿಚಿಯನ್ನು ಹುಡುಕುತ್ತಿದ್ದಾನೆ. ಗುಂಪನ್ನು ದಾಟಿ ಹುಡುಕುತ್ತ ಓಡುತ್ತಾನೆ. ಕೆಮೆರಾ ಅವನೊಡನೆ ಲಾಳ ತಿರುಗುತ್ತದೆ.

ಕೆಲಸಗಾರ : ರಿಚಿ.... ರಿಚಿ....

ಗಿಡಮರಗಳಿಲ್ಲದ ಚಿಕ್ಕ ಬಯಲಲ್ಲಿ ಕೆಲಸಗಾರ ರಿಚಿಯನ್ನು ಹುಡುಕುತ್ತಾ ಕೆಮೆರಾದ ದಿಕ್ಕಿಗೆ ಓಡಿಬರುತ್ತಿದ್ದಾನೆ. ಮುನ್ನೆಲೆಯಲ್ಲಿ ಹರಕು ಬಟ್ಟೆತೊಟ್ಟ ಕೆಲಸಗಾರರು ಕೆಲವರು ಚಲಿಸುತ್ತಿರುವುದು ಕಾಣುತ್ತದೆ.

ಕೆಲಸಗಾರ : ರಿಚಿ.... ರಿಚಿ....

ಸಾರ್ವಜನಿಕ ಕಾರಂಜಿಯೊಂದರ ಬುಡಕ್ಕೆ ಆಂಟೋನಿಯೋ ರಿಚಿ ಕೂತಿದ್ದಾನೆ. ತನ್ನನ್ನು ಕರೆಯುತ್ತ ಬಂದ ಕೆಲಸಗಾರನ ಕಡೆ ನೋಡುತ್ತಾನೆ.

ಕೆಲಸಗಾರ : ಏಯ್ ರಿಚಿ, ನಿನ್ನ ಕಿವಿ ಕಿವುಡಾಗಿದೆಯಯಾ ?
ಅಲ್ಲಿ ನಿನ್ನ ಕರೀತಿದಾರೆ, ಬಾ ಬೇಗ.

ರಿಚಿ ಮೇಲಕ್ಕೇಳುತ್ತಾನೆ. ಇಬ್ಬರು ಗುಂಪಿನಕಡೆ ಧಾವಿಸಿ ನಡಯುವುದನ್ನು ಕೆಮೆರಾ ಲಾಳ ತಿರುಗಿ ತೋರಿಸುತ್ತದೆ. ಗುಂಪನ್ನು ಹೊಕ್ಕ ರಿಚಿ ಅದರಲ್ಲಿ ಮುಳುಗಿ ಹೋಗುತ್ತಾನೆ. ಅಧಿಕಾರಿ ಗದರುತ್ತಿದ್ದಾನೆ.

ಧ್ವನಿ : (ಹೊರಗಿನಿಂದ) ನಂದು ಏನಾಯ್ತು ಹೇಳಿ. ನಾನು ಕಟ್ಟಡದ ಕೆಲಸ ಮಾಡೋನು. ನಾನೇನು ಉಪವಾಸ ಸಾಯಬೇಕಂತೀರಾ ?

ಅಧಿಕಾರಿ : ನಾನೇನು ಮಾಡ್ಲಿ ಅದಕ್ಕೆ ? ನಿಮಗೆ ಕಲಸ ಇಲ್ಲದಿದ್ರೆ ನನ್ನ ತಪ್ಪಾ ?

ರಿಚಿ ಮೆಟ್ಟಲು ಹತ್ತಿ ಅಧಿಕಾರಿಗಿಂತ ನಾಲ್ಕು ಮೆಟ್ಟಲು ಕೆಳಗೆ ನಿಲ್ಲುತ್ತಾನೆ.

ಅಧಿಕಾರಿ : (ಮುಂದುವರೆಸುತ್ತ) ಸ್ವಲ್ಪ ತಾಳ್ಮೆಯಿಂದಿರಿ. ನಿಮಗೆ ಕೆಲಸ ಕೊಡೋದಿಕ್ಕೆ ನಾನಿರೋದು. ನೋಡೋಣ. ಎಲ್ಲರಿಗೂ ಸಿಕ್ಕಬಹುದು. (ತನ್ನ ದಾಖಲೆಯಲ್ಲಿ ಕಣ್ಣಾಡಿಸುತ್ತ)....ಮನೆಗೆಲಸದವರ ಹೆಸರೇ ಇಲ್ಲಲ್ಲಪ್ಪಾ ಇಲ್ಲಿ.... ಹೂಂ. ರಿಚಿ ಬಂದನಾ ?

ರಿಚಿ : ಬಂದೆ.

ಅಧಿಕಾರಿ : ನಿನಗೊಂದು ಕೆಲಸ ಇದೆ ಇಲ್ಲಿ.

ರಿಚಿ : (ಹರ್ಷಾತಿರೇಕದಿಂದ) ಕೆಲಸಾ ? ನನಗಾ ?

ಅಧಿಕಾರಿ : ಹೂಂ. ಪೋಸ್ಟರ್‌ಗಳನ್ನು ಅಂಟಿಸೋ ಕೆಲಸ. *

ಅಧಿಕಾರಿ ಜೋಬಿನಿಂದ ಕೆಲವು ಪತ್ರ ತೆಗೆದು ಅದರಲ್ಲಿ ಒಂದು ಕಾರ್ಡನ್ನು ರಿಚಿಗೆ ಕೊಡುತ್ತಾನೆ.

ಅಧಿಕಾರಿ : ಕೂಡಲೇ ಅವರ ಕಛೇರಿಗೆ ಹೋಗಿ ಸೇರಿಕೋ. ಅವರಿಗೆ ಈ ಕಾರ್ಡ್ ತೋರಿಸು.

ರಿಚಿ ಕಾಗದ ತೆಗೆದುಕೊಳ್ಳುತ್ತಾನೆ. ನಂಬಿಕೆಯಿಲ್ಲದವರಂತೆ ಆಶ್ಚರ್ಯದಿಂದ ಅದನ್ನೇ ದಿಟ್ಟಿಸುತ್ತಿದ್ದಾನೆ.

ಅಧಿಕಾರಿ : (ಮೃದುವಾಗಿ) ಕಾಗದ ಹುಷಾರಾಗಿ ಇಟ್ಕೊ.

ರಿಚಿ : (ಹರ್ಷಾತಿರೇಕದಿಂದ) ಎಷ್ಟು ದಿನ ಆಗಿತ್ತು ಕೆಲ್ಸ ಇಲ್ಲದೆ........

ಧ್ವನಿ : (ಗುಂಪಿನಿಂದ) ಹಾರಿ........ ನನ್ನದೇನಾಯ್ತು ?

ಅಧಿಕಾರಿ : ನೋಡಿ. ಎರಡು ಜನ ಟರ್ನರ್‌ಗಳಿಗೆ ಕೆಲಸ ಇದೆ. ಆದರೆ ನಿಮ್ಮಲ್ಲಿ ಟರ್ನರ್ ಯಾರು ಇಲ್ಲ ಅಲ್ವಾ ?

ಧ್ವನಿ : ಟರ್ನರ್ ಅಲ್ಲ ಆದ್ರಿಂದ ನಾನು ಕೊಳೀತಾ ಸಾಯ್ಬೇಕಾ ?

ಅಧಿಕಾರಿ : (ಪತ್ರದ ಕಟ್ಟು ಬೀಸುತ್ತಾ) ಹೌದು ಅದು ನಂದೇ ತಪ್ಪು—ಅಲ್ಲ ? (ರಿಚಿಯತ್ತ ತಿರುಗಿ) ಹೇ....ರಿಚಿ.

ರಿಚಿ ಮೆಟ್ಟಲಿಳಿದು ಹೋಗುತ್ತಿದ್ದವನು ತಟ್ಟನೆ ತಿರುಗುತ್ತಾನೆ.

ಅಧಿಕಾರಿ : ಕೆಲಸಕ್ಕೆ ಸೇರೋಕೆ ಹೋಗುವಾಗ ಸೈಕಲ್ ತಗೊಂಡು ಹೋಗೋದು ಮರೀಬೇಡ.

ರಿಚಿಗೆ ಆತಂಕವಾಗುತ್ತದೆ. ಕೈಯಲ್ಲಿರುವ ಪೇಪರ್ ದಿಟ್ಟಿಸುತ್ತಾನೆ.

ಅಧಿಕಾರಿ : (ಹೊರಗಿನಿಂದ) ಅಲ್ಲಿ ಬರೆದಿದೆ ನೋಡು.

ರಿಚಿ : (ಗೊಂದಲದಿಂದ) ನನ್ನ ಹತ್ರ ಸೈಕಲ್ ಇದೆ. ಆದ್ರೆ ಸದ್ಯ ಇಲ್ಲ....... ಕೆಲವು ದಿನದಲ್ಲಿ ಸಿಗುತ್ತೆ.

ಅಧಿಕಾರಿ : ಊಹೂಂ. ಅದು ಪ್ರಯೋಜ್ನ ಇಲ್ಲ. ಈಗ ಸೈಕಲ್ ಇದೆಯೋ ಕೆಲ್ಸ ಇದೆ, ಇಲ್ದಿದ್ರೆ ಇಲ್ಲ.

ರಿಚಿ : ಅದಕ್ಕೇನು. ಕೆಲವು ದಿನ ನಾನು ನಡೆದೇ ತಿರುಗಾಡುತ್ತೀನೆ.

---

*—ಇಟಲಿಯ ನಗರಗಳಲ್ಲಿ ಪ್ರಚಾರದ ಪೋಸ್ಟರ್‌ಗಳನ್ನು ಅಂಟಿಸುವ ಕೆಲಸವನ್ನು ನಗರಸಭೆಯು ಗುತ್ತಿಗೆಗೆ ಪಡೆದುಕೊಂಡು ಮಾಡಿಸುವುದು ರೂಢಿ.

ಅಧಿಕಾರಿ : ಹೇಳಿಬಿಟ್ಟಿದೇನೆ ನೋಡು, ಸೈಕಲ್ ಇದೆಯೋ ಇಲ್ಲೋ ಹೇಳು. ಇಲ್ದಿದ್ರೆ ಕೆಲ್ಸ ಬೇರೆಯವರಿಗೆ ಕೊಡ ಬೇಕಾಗುತ್ತೆ.

ಗುಂಪಿನಲ್ಲಿ ಒಬ್ಬ : ಹೋಯ್ ನನ್ನ ಹತ್ರ ಸೈಕಲ್ ಇದೆ.

ಇನ್ನೊಬ್ಬ : ನೀ ಒಬ್ನೇ ಅಲ್ಲ. ನನ್ನ ಹತ್ರಾನೂ ಇದೆ.

ಹಲವು ಧ್ವನಿಗಳು : ಎಲ್ಲರ ಹತ್ರಾನೂ ಇರುತ್ತೆ........ನಂಗೆ ಕೊಡಿ, ನನ್ನ ಹತ್ರ ಇದೆ....ಹೂಂ ನನ್ನ ಹತ್ರಾನೂ... ನಮಗೆ ಕೊಡಿ ಕೆಲ್ಸ....ನಮಗೆ....

ಅಧಿಕಾರಿ : (ಕಿರಿಚುತ್ತಾ) ನೀನು ಮೇಸ್ತ್ರಿ. ಆ ವರ್ಗಕ್ಕೆ ಸೇರಿದವನಲ್ಲ.

ಆತ : ಹಾಗಾದ್ರೆ ನನ್ನ ವರ್ಗಾನೇ ಬದಲಾಯಿಸಿ ಬಿಡಿ.

ಅಧಿಕಾರಿ : ಅವೆಲ್ಲ ಬರೋದಿಲ್ಲ. ನೀವು ಯಾವ ವರ್ಗ ದಲ್ಲಿದಿರೋ ಅಲ್ಲೇ ಇರಬೇಕು. (ರಿಚಿಗೆ) ಹೂಂ. ಈಗ ಹೇಳು, ಬೈಸಿಕಲ್ ಇದೆಯೊ ?

ರಿಚಿ : ಹೂಂ. ಇದೆ. ನಾಳೆ ಬೆಳಿಗ್ಗೆ ಅಲ್ಲಿಗೆ ಸೈಕಲ್ ಸಮೇತ ಹೋಗಿ ಸೇರ್ಕೊಳ್ತೇನೆ.

ರಿಚಿ ಹೊರಡಲು ತೊಡಗುತ್ತಾನೆ.

ಅಧಿಕಾರಿ : ಹೇಯ್, ನಮಗೆ ಮೋಸ ಮಾಡಿದ್ರೆ ನಡೆಯೋ ದಿಲ್ಲ. ಅಲ್ಲಿಗೆ ಬೈಸಿಕಲ್ ಇಲ್ಲದೇ ಹಾಗೇ ಹೋದ್ರೆ ಸೇರಿಸ್ಕೊಳ್ಳೋದಿಲ್ಲ.

ರಿಚಿ : (ಮೆಟ್ಟಿಲಿಳಿಯುತ್ತ)....ಅಂದ್ರೆ ಇನ್ನೂ ಅಷ್ಟು ವರ್ಷ ಇದೇ ನಿರುದ್ಯೋಗ....ಹೂಂ. ನಾನು ಸೈಕಲ್ ಸಮೇತ ಬಂದ್ರಾಯ್ತಲ್ಲಾ ? ಸರಿ.

ಅಧಿಕಾರಿ ತನ್ನ ಪಟ್ಟಿಯನ್ನು ಪುನಃ ನೋಡುತ್ತಾನೆ. ಗುಂಪಿನ ಮೂಲಕ ರಿಚಿ ಕೆಳಗಿಳಿದು ಕೆಮೆರಾದ ಕಡೆ ಬರುತ್ತಾನೆ. ಗುಂಪನ್ನು ದಾಟಿ ಕಟ್ಟಡಗಳ ಕಡೆ ನಡೆದು ಕಣ್ಮರೆಯಾಗುವುದನ್ನು ಕೆಮೆರಾ ಲಾಳ ತಿರುಗಿ ತೋರಿಸುತ್ತದೆ.

ಅಧಿಕಾರಿ : (ಹೊರಗಿನಿಂದ) ಕೆಟಾಲ್ಡಿ ಇದಾನಾ ? ಕೆಟಾಲ್ಡಿ.

ಧ್ವನಿ : (ಹೊರಗಿನಿಂದ) ಹೂಂ. ಇದಾನೆ.

ಅಧಿಕಾರಿ : (ಹೊರಗಿನಿಂದ) ಎರಡು ದಿನದ ಕೂಲಿ ಕೆಲಸ ಇದೆ. ನಿನಗೆ ಇಷ್ಟ ಇದ್ದರೆ.

ಧ್ವನಿ : ಹಾಂ, ಹಾಂ, ಹೋಗ್ತೇನೆ. ಆ ಕೆಲಸ ಬೇಕು ನನಗೆ

ರಿಚಿ ಒಂದು ಕಟ್ಟಡದ ಮನೆಯಲ್ಲಿ ಅದೃಶ್ಯನಾಗುತ್ತಾನೆ.

ಗುಂಪಿನ ಧ್ವನಿ ಕರಗುತ್ತದೆ.

ಕ್ಷಯ–ವರ್ಧನ (Dissolve)

ಮತ್ತೊಂದು ಕಟ್ಟಡದ ಎದುರು ರಿಚಿ ಕೆಮೆರಾದ ಕಡೆಗೆ ಓಡಿ ಬರುತ್ತಿರುವ ದೃಶ್ಯ ವೊದಲಾಗುತ್ತದೆ. ರಿಚಿಯ ಜೊತೆ ಕೆಮೆರಾ ಹಿಂದೆ ಸರಿಯುತ್ತಿದೆ. ಖಾಲಿ ಜಾಗ ವೊಂದರ ಸಮೀಪ ರಿಚಿ ನಿಲ್ಲುತ್ತಾನೆ. ಒಂದು ತಂತಿ ಬೇಲಿಯ ಆಚೆ ನಲ್ಲಿಯೊಂದರ ಎದುರು ನೀರಿಗಾಗಿ ಹೆಂಗಸರು ಸಾಲುಗಟ್ಟಿ ನಿಂತಿದ್ದಾರೆ.

ರಿಚಿ : ಮಾರಿಯಾ....ಏಯ್ ಮಾರಿಯಾ....

ಮಾರಿಯಾ ಇತ್ತ ತಿರುಗುತ್ತಾಳೆ, ತೀರ ಸಾಮಾನ್ಯವಾದ ಬಟ್ಟೆ ತೊಟ್ಟ ಸ್ವಲ್ಪ ಕಂದು ಬಣ್ಣದ ಈ ಹೆಂಗಸು ರಿಚಿಯ ಹೆಂಡತಿ, ಮಾರಿಯಾ ಇತ್ತ ನೋಡುತ್ತಿರುವಾಗ ಗುಂಪಿನ ಗುಜು ಗುಜು, ಗಡಿಬಿಡಿ ನಡದೇ ಇದೆ.

ಧ್ವನಿಗಳು : ಹೂಂ. ಹೂಂ. ಬಿಡು....ಈಗ ನನ್ನ ಸರದಿ.... ....ಊಹೂಂ ನಂದು....ಎಷ್ಟು ಹೊತ್ತು ಆದು....ನಾನು ಆಗಿಂದ ನಿಂತಿದ್ದೇನೆ.

ಮಾರಿಯಾ ಎರಡು ಬಕೆಟ್ ತುಂಬ ನೀರು ತುಂಬಿಸಿ ಎರಡು ಕೈಯಲ್ಲಿ ಎರಡು ಹಿಡಿದು ಗುಂಪಿನಿಂದ ಈಚೆ ಬರುತ್ತಾಳೆ. ಆಕೆ ರಿಚಿಯ ಸಮೀಪ ಬರುತ್ತಿರುವುದನ್ನು ಕೆಮೆರಾ ಲಾಳ ತಿರುಗಿ ತೋರಿಸುತ್ತದೆ.

ಮಾರಿಯಾ : ಏನು ? ಏನು ಸಮಾಚಾರ ?

ರಿಚಿ : ಅದೃಷ್ಟ ವಕ್ರಿಸಿದ ಹಾಗೆ ಕಾಣುತ್ತೆ.

ಮಾರಿಯಾ : ಏನೋ ಆಯಿತಾ ?

ರಿಚಿ : ಹೂಂ. ನನಗೆ ಒಂದು ಕೆಲ್ಸ ಸಿಗ್ತು....ಆದರೆ.... ಅದಕ್ಕೆ ಸೇರಿಕೊಳ್ಳೋ ಹಾಗಿಲ್ಲ.

ಇಬ್ಬರೂ ಕಟ್ಟಡಗಳ ಕಡೆ ನಡೆಯುತ್ತಾರೆ. ಎರಡು ಬಕೆಟ್ ಹೊತ್ತ ಮಾರಿಯಾ ಅವನ ಜೊತೆಗೆ ಬರಲಾಗದೆ ಹಿಂದೆ ಬೀಳುತ್ತಾಳೆ.

ಮಾರಿಯಾ : ಸ್ವಲ್ಪ ನಿಲ್ಲು. ಏನಂದೆ, ಸರಿಯಾಗಿ ಹೇಳು ? ಯಾವ ಕೆಲಸ ? ಹ್ಯಾಗೆ ಸಿಗ್ತು ?

ರಿಚಿ : ಕೆಲಸ ಒಳ್ಳೆದೇ....ಅದೂ ಪಟ್ಟಣದಲ್ಲೇ....

ರಿಚಿ ಮತ್ತೆ ನಡೆಯುತ್ತಾನೆ. ಅವನನ್ನು ಸರಿಗಟ್ಟಿ ನಡೆಯಲು ಪ್ರಯತ್ನಿಸಿದ ಮಾರಿಯಾ ಮುಗ್ಗರಿಸುತ್ತಾಳೆ ರಿಚಿ ಹಿಂದೆ ಬಂದು ಒಂದು ಬಕೆಟ್ ತೆಗೆದುಕೊಳ್ಳು

ತ್ತಾನೆ. ಹಿನ್ನೆಯಲ್ಲಿ ಕೆಲವು ಮಕ್ಕಳು ಆಡುತ್ತಿದ್ದಾರೆ. ದಂಪತಿಗಳು ನಡೆಯುತ್ತಿರುವುದನ್ನು ಕೆಮೆರಾ ಅನುಸರಿಸಿ ಹಿಂದೆ ಸರಿಯುತ್ತದೆ.

ಮಾರಿಯಾ : ತೊಂದರೆ ಏನು? ಕೆಲಸ ಗ್ಯಾರಂಟಿ ಆಗಲಿಲ್ವಾ ?

ರಿಚಿ : ಗ್ಯಾರಂಟಿ ಮಾಡಿಕೊಳ್ಳೋಕೆ ಒಂದು ಸೈಕಲ್ ಇರಬೇಕು. ಸೈಕಲ್ ಇಲ್ದಿದ್ರೆ ಕೆಲಸ ಇಲ್ಲ. ನಾಳೆ ನಾನು ಸೇರಿಕೊಳ್ಳದೇ ಇದ್ರೆ ಬೇರೆ ಯಾರನ್ನಾದ್ರೂ ಸೇರಿಸ್ಕೋತಾರೆ.

ಚೌಕಾಕಾರದ ಕಟ್ಟಡವೊಂದರ ಹಜಾರದ ಕಡೆ ಇಬ್ಬರು ಹೋಗುತ್ತಾರೆ. ಹೊಸ್ತಿಲಲ್ಲಿ ಮರಿಯಾ ಬಕೆಟ್ ಕೆಳಗಿಟ್ಟು ನಿಲ್ಲುತ್ತಾಳೆ.

ಮಾರಿಯಾ : ಏನು ಮಾಡೋದು ಈಗ ?

ರಿಚಿ : ಮಾಡೋದೇನು.......

ಕತ್ತಲು ಕತ್ತಲಾದ ಆ ಕಟ್ಟಡದ ಒಳಗಿಂದ ಒಬ್ಬ ಧಡೂತಿ ಹೆಂಗಸು ಬಂದು ಇವರಿಬ್ಬರ ಮಧ್ಯೆ ಹಾದುಹೋಗುತ್ತಾಳೆ.

ಹೆಂಗಸು : ಹಲೋ

ಮಾರಿಯಾ : ಹಲೋ....

....ಆಂಟೊನೀಯೋ, ನೀನು ಸೈಕಲ್ ಅಡವಿಡಬಾರದಿತ್ತು.

ಬಕೆಟ್‌ನ್ನು ಎತ್ತಿಕೊಂಡು ಮಾರಿಯಾ ಮೆಟ್ಟಿಲು ಹತ್ತುತ್ತಾಳೆ. ಕೆಮೆರಾ-ಮೆಟ್ಟಿಲಿನ ಮೇಲಿನಿಂದ ನೋಡುತ್ತಿದೆ. ರಿಚಿ ಹತಾಶೆಯಿಂದ ಕೈಯೆತ್ತುತ್ತಾನೆ.

ರಿಚಿ : ಮತ್ತೆ ಹೊಟ್ಟೆಗೇನು ಮಾಡಬೇಕಿತ್ತು ?

ಮಾರಿಯಾ : ಓ! ಸುಮ್ನಿರು.

ರಿಚಿ : (ಅನುಸರಿಸುತ್ತ) ಯಾಕಾದ್ರೂ ನಾನು ಹುಟ್ಟಿದ್ನೋ ಏನೋ....ಸಾಯಲಿ.

ಮಾರಿಯಾ : ಹೂಂ. ಆ ಮಾತೆಲ್ಲ ಸಾಕು.

ರಿಚಿ : ಹೀಗೆ ಬದುಕೊಕಿಂತ ಹೊಳೆ ಹಾರೋದು ವಾಸಿ.

ಮಾರಿಯಾ : ಸಾಕು....ಸಾಕು ...ಸಾಕು.

ಇಬ್ಬರು ತಮ್ಮ ಕೋಣೆಯೆದುರು ನಿಂತು ಬಾಗಿಲು ತೆಗೆಯುತ್ತಾರೆ. ಒಳಗೆ ಹೋದೊಡನೆ ಬಾಗಿಲು ಇವರ ಹಿಂದೆ ಮುಚ್ಚಿಕೊಳ್ಳುತ್ತದೆ. ರಿಚಿ ಬಕೆಟ್ ಹಿಡಿದು ನಿಂತಿದ್ದಾನೆ. ಮಾರಿಯಾ ಬಕೆಟ್ ಹಿಡಿದು ಒಳ ಬರುತ್ತಿರುವುದನ್ನು ಕೆಮೆರಾ ಅನುಸರಿಸುತ್ತದೆ. ಅವಳು ತಿರುಗಿ ಅಡುಗೆ ಮನೆಯ ಮೇಜಿನ ಮೇಲೆ ಬಕೆಟ್ ಇರಿಸುವುದನ್ನು ಕೆಮೆರಾ ಲಾಳ ತಿರುಗಿ ಕಾಣಿಸುತ್ತದೆ. ಮಾರಿಯಾ ಅಲ್ಲಿಂದ ಬಂದು ರಿಚಿಯ ಕೈಯಲ್ಲಿದ್ದ ಬಕೆಟ್ಟನ್ನು ಒಯ್ಯುತ್ತಾಳೆ. ರಿಚಿ ಮಲಗುವ ಕೋಣೆಗೆ ಹೋಗಿ ಹಾಸಿಗೆಯ

ಮೇಲೆ ಕೂರುತ್ತಾನೆ. ಮಂಚದ ಹಿಂದೆ ಗೋಡೆಯ ಮೇಲೆ ಎರಡು ಕುಟುಂಬ ಚಿತ್ರಗಳನ್ನು ನೇತುಹಾಕಿದೆ. ಅದಕ್ಕೆ ಕಪ್ಪು ರಿಬ್ಬನ್ನು ಕಟ್ಟಿದ್ದಾರೆ. ಮಾರಿಯಾ ಒಳ ಬರುತ್ತಾಳೆ. ಬದಿಗಿರುವ ಬಟ್ಟೆ ಪೆಟ್ಟಿಗೆಯಿಂದ ಒಂದು ಪ್ಯಾಕೆಟ್ ತೆಗೆಯುತ್ತಾಳೆ. ರಿಚಿಯ ಹತ್ತಿರ ಬಂದು ಅವನ ತೋಳು ಹಿಡಿದು ಎಬ್ಬಿಸುತ್ತಾಳೆ.

ಮಾರಿಯಾ : ಏಳು ಆಂಟೋನಿಯೊ.

ರಿಚಿ ಏಳುತ್ತಾನೆ. ಅವನಿಗೆ ಗೊಂದಲವಾಗಿದೆ. ಮಾರಿಯಾ ಹಾಸಿಗೆಯ ಬಟ್ಟೆಗಳನ್ನು ಬರಬರನೆ ಎಳೆದು ಹಾಸಿದ ಶೀಟ್‌ಗಳನ್ನು ತೆಗೆಯುತ್ತಾಳೆ.

ರಿಚಿ : ಏನು ? ಏನು ಮಾಡ್ತಿದಿಯಾ ?

ಮಾರಿಯಾ : ಬೆಡ್‌ಶೀಟ್ ಇಲ್ಲದೇನೂ ನಾವು ಮಲಗ ಬಹುದು ಅಲ್ವಾ ?

ಶೀಟ್‌ಗಳನ್ನು ಹಿಡಿದು ಅಡುಗೆ ಮನೆಯೊಳಕ್ಕೆ ಹೋಗುತ್ತಾಳೆ. ಕೆಮೆರಾ ಲಾಳ ತಿರುಗುತ್ತದೆ. ಮಾರಿಯಾ ಬಟ್ಟೆಗಳನ್ನು ಮೂಲೆಗೆಸೆದು ಬಕೆಟ್ಟಿನ ನೀರನ್ನು ಅದರ ಮೇಲೆ ಸುರಿಯುವುದು ಕಾಣುತ್ತದೆ.

ಕ್ಷಯ–ವರ್ಧನ

ಒಂದು ಕೌಂಟರಿನ ಕಿರಿದಾದ ಬಾಗಿಲು. ಅದು ಮುನುಸಿಪಲ್ ಗಿರವಿ ಅಂಗಡಿ.* ಒಬ್ಬ ಅಧಿಕಾರಿಯೆದುರು ಕೌಂಟರಿನ ಮೇಲೆ ಕೆಲವು ಶೀಟ್‌ಗಳನ್ನು ಇಡುವುದು ಕಾಣುತ್ತದೆ. ಶೀಟ್ ಇಟ್ಟು ಮಾರಿಯಾ ಅವನ ಪ್ರತಿಕ್ರಿಯೆ ಗಮನಿಸುತ್ತಿದ್ದಾಳೆ. ಕೆಮೆರಾದೆದುರಿಗಿರುವ ಅಧಿಕಾರಿ ಮಾರಿಯಾಳ ವಿವರಣೆಗೆ ಅಷ್ಟಾಗಿ ಕಿವಿಗೊಡದೆ ಶೀಟ್‌ಗಳನ್ನು ಗಂಭಿರವಾಗಿ ಪರೀಕ್ಷಿಸುತ್ತಿದ್ದಾನೆ.

ಮಾರಿಯಾ : ಹೂಂ. ಆರು ಶೀಟ್ ಇದಾವೆ. ಹತ್ತಿ ಮತ್ತು ಉಣ್ಣೇದು. ಬಹಳ ಒಳ್ಳೇ ಬಟ್ಟೆ ಅದು.

ಅಧಿಕಾರಿ : ಉಪಯೋಗಿಸಿದ್ದು ಇದು....

ಮಾರಿಯಾ : ನಾಲ್ಕು ಮಾತ್ರ ಉಪಯೋಗ್ಸಿದ್ದು. ಎರಡು ಹೊಸತು.

ಅಧಿಕಾರಿ : ಎಷ್ಟಿದಾವೆ ಇಲ್ಲಿ ?

ಮಾರಿಯಾ : ಡಬ್ಬಲ್ ಶೀಟ್ ಮೂರು. ಸಿಂಗಲ್ ಶೀಟ್ ಮೂರು.

ಅಧಿಕಾರಿ : ........ (ಲೆಕ್ಕ ಹಾಕಿ).... ಮತ್ತು ಮೂರು........

---

* — ನಗರಸಭೆ ಗಿರವಿ ಅಂಗಡಿಗಳನ್ನು ನಡೆಸುವುದು ಇಟಲಿಯಲ್ಲಿನ ರೂಢಿ.

( ಶೀಟನ್ನು ಒಂದುಕಡೆ ತಳ್ಳಿ ಯೋಚಿಸಿ )........ಏಳು ಸಾವಿರ ಲೈರ್.

ಮಾರಿಯಾ : ಏಳು ಸಾವಿರ ಅಷ್ಟೇನಾ ?

ಆಕೆ ಹಿಂತಿರುಗಿ ನೋಡಿ ಹಿಂದಕ್ಕೆ ಹೆಜ್ಜೆಯಿಡುತ್ತಾಳೆ. ರಿಚಿ ಮುಂದೆಬರುತ್ತಾನೆ.

ರಿಚಿ : ಇನ್ನೊಂದು ಸ್ವಲ್ಪ ಹೆಚ್ಚು ಮಾಡೋಕೆ ಆಗಲ್ವಾ ?

ಅಧಿಕಾರಿ : ಉಪಯೋಗಿಸಿದವು ನೋಡು........

ಕಿಟಕಿಯ ಚೌಕಟ್ಟನಲ್ಲಿ ಮಾರಿಯಾ ಮತ್ತು ರಿಚಿಯವರ ಆಸೆಯ ಮುಖ ಕಾಣುತ್ತಿದೆ. ಅಧಿಕಾರಿ ಶೀಟ್‌ಗಳನ್ನು ತನ್ನ ಸಹಾಯಕನ ಕಡೆ ತಳ್ಳುತ್ತಾನೆ.

ಅಧಿಕಾರಿ : ಆಯ್ತು ಆಚೆ ಇಡು. ( ಇತ್ತತಿರುಗಿ ) ಏಳು ಸಾವಿರದ್ಯೆನೂರು........

ಮಾರಿಯಾ-ರಿಚಿ ಇಬ್ಬರ ಮುಖ ಅರಳುತ್ತದೆ.

ಅಧಿಕಾರಿ : ( ಬರೆದುಕೊಳ್ಳುತ್ತ ) ಹೆಸರು ?

ಮಾರಿಯಾ : ....ರಿಚಿ ....ಮಾರಿಯಾರಿಚಿ ; ವೆಲ್‌ಮೇಲಿಯಾನ ಬಿಲ್ಡಿಂಗ್, ನಂ. ೧, H ಮಹಡಿ........

ಅಧಿಕಾರಿ : ... ....ನಂ. ೧, H ಮಹಡಿ....ಹೂಂ.

ಅಧಿಕಾರಿ ನೋಟಿನ ಕಟ್ಟು ತೆಗೆದು ಎಣಿಸಲು ಪ್ರಾರಂಭಿಸುತ್ತಾನೆ.

ಅಧಿಕಾರಿ : ಒಂದು....ಎರಡು....ಮೂರು....ನಾಲ್ಕು....ಐದು....

ಕೆಮೆರಾದ ದೃಷ್ಟಿ ಈಗ ಮಾರಿಯಾಳ ಮೇಲಿದೆ. ಅವಳೂ ಹಣ ಎಣಿಸುತ್ತಿದ್ದಾಳೆ.

ಮಾರಿಯಾ : ....ಆರು ....ಏಳು. ಒಂದು.... ಎರಡು.... ಮೂರು.... ನಾಲ್ಕು.... ಐದು. ಹೂಂ. ೭೫೦೦. (ಅಧಿಕಾರಿಯಿಂದ ಹಣತೆಗೆದುಕೊಳ್ಳುತ್ತ) ಬರ್ತೀನಿ-ಥ್ಯಾಂಕ್ಯೂ.

ರಿಚಿ ಮಾರಿಯಾ ಅಲ್ಲಿಂದ ಹೊರಡುತ್ತಾರೆ. ಅನಂತರ ಆಕ್ಯೂನಲ್ಲಿ ನಿಂತ ಒಬ್ಬ ಮುಂದೆ ಬಂದು ಕೌಂಟರಿನ ಕಿಟಕಿಯಲ್ಲಿ ಬೈನಾಕ್ಯುಲರ್ ಇಡುತ್ತಾನೆ, ಗಿರವಿಗಾಗಿ.

ಇನ್ನೊಂದು ಕಿಟಕಿಯ ಬಾಗಿಲು ತೆರೆಯುತ್ತಿದೆ. ಕೌಂಟರಿನ ಕಿಟಕಿಯ ಮೂಲಕ ಇನ್ನೊಬ್ಬ ಅಧಿಕಾರಿಯ ಮುಖ ಕಾಣುತ್ತದೆ. ಅವನ ಹಿಂದೆ ಸೈಕಲ್‌ಗಳನ್ನು ಸಾಲಾಗಿ ನೇತು ಹಾಕಿರುವುದು ಕಂಡು ಬರುತ್ತಿದೆ. ಕಿಟಕಿಯಲ್ಲಿ ರಿಚಿಯ ಮೆಲುನಗೆಯ ಮುಖ ಕಾಣುತ್ತದೆ. ಅವನು ಅಧಿಕಾರಿಗೆ ತನ್ನ ಸೈಕಲ್ಲಿನ ಗಿರವಿ ಟಿಕೆಟ್ ಕೊಡುತ್ತಾನೆ. ಅಧಿಕಾರಿ ಕಡತ ತೆಗೆದು ಟಿಕೆಟ್ಟಿಗೂ ಕಡತಕ್ಕೂ ತಾಳೆ ನೋಡುತ್ತಾನೆ.

ಅಧಿಕಾರಿ : ಆರು ಸಾವಿರದ ನೂರು ಆಗತ್ತೆ.

ರಿಚಿ : (ಕೊಂಚ ಆಶ್ಚರ್ಯದಿಂದ) ಯಾಕೆ ?
ಅಧಿಕಾರಿ : ಭಡ್ಡಿ ಬೀಳತ್ತಲ್ಲ.
ರಿಚಿ : ಓಹ್! (ಹಣಕೊಡುತ್ತ) ತಗೊಳ್ಳಿ.

ಅಧಿಕಾರಿ ಒಂದು ಕೈಯಲ್ಲಿ ಟಿಕೆಟ್ ಹಿಡಿದು ಸೈಕಲ್ಲಿನ ಸರಮಾಲೆಯಂತಿರುವ ಸಾಲಿನಲ್ಲಿ ಒಂದೊಂದೇ ಸೈಕಲ್ ನೋಡುತ್ತ ಹೋಗುತ್ತಾನೆ. ರಿಚಿ ಕೌಂಟರಿನ ಮೂಲಕ ಆಸಕ್ತಿಯಿಂದ ಗಮನಿಸುತ್ತಿದ್ದಾನೆ.

ರಿಚಿ : ನನ್ನದು FIDES. ಆ ಕೆಂಪದರ ಪಕ್ಕಕ್ಕಿದೆ ನೋಡಿ.... ....ಅಲ್ಲಿ.
ಅಧಿಕಾರಿ : ನನಗೆ ಗೊತ್ತಿದೆ.

ಈಚೆ ಇನ್ನೊಬ್ಬ ಅಧಿಕಾರಿ ಒಂದು ಪ್ಯಾಕೆಟ್ ಹಿಡಿದು ಹಾದು ಹೋಗುತ್ತಾನೆ. ಕೆಮೆರಾ ಅವನೊಡನೆ ಲಾಳ ತಿರುಗುತ್ತದೆ. ಆ ಅದಿಕಾರಿ ಬಂದು ಭಾರೀ ಖಾನೆ ಖಾನೆಯ ರ್‍ಯಾಕಿನೆದುರು ನಿಲ್ಲುತ್ತಾನೆ. ಅವನು ಆ ರ್‍ಯಾಕನ್ನು ಹತ್ತಲು ತೊಡಗುತ್ತಾನೆ. ಕೆಮೆರಾ ಮುಖ ಎತ್ತುತ್ತದೆ. ಅನೇಕ ಖಾನೆಗಳ ಎತ್ತರಕ್ಕೆ ಏರಿ ಒಂದು ಖಾನೆಯ ಪ್ಯಾಕೆಟ್ಟಿನ ರಾಶಿಯಲ್ಲಿ ಈ ಪ್ಯಾಕೆಟ್ಟನ್ನೂ ತುರುಕುತ್ತಾನೆ. ತುಂಬಿ ತುಳುಕುವ ಅಸಂಖ್ಯಾತ ಪ್ಯಾಕೆಟ್‌ಗಳ ಮಧ್ಯೆ ತನ್ನ ಶೀಟ್ ಸೇರಿ ಹೋಗಿದ್ದನ್ನು ರಿಚಿ ನೋಡುತ್ತಾನೆ. ಇನ್ನೊಂದು ಗಾಜಿನ ಬಾಗಿಲು ಕಾಣುತ್ತದೆ. ಆ ಬಾಗಿಲು ತೆರೆದು ಅದರಿಂದ ಒಬ್ಬ ಬಂದು ಸೈಕಲ್ ದಬ್ಬಿ ತರುತ್ತಾನೆ, ರಿಚಿ ಉದ್ವೇಗದಿಂದ ಹಾರಿ ಅದನ್ನು ಪ್ರೀತಿಯಿಂದ ಹಿಡಿದುಕೊಳ್ಳುತ್ತಾನೆ.

ಅಧಿಕಾರಿ : ಸ್ವಲ್ಪ ತಡಿ.

ಅಧಿಕಾರಿ ಸೈಕಲ್ಲಿಗೆ ಕಟ್ಟಿರುವ ಗುರುತು ಚೀಟಿಯನ್ನು ಬಿಚ್ಚಿಕೊಂಡು ಸೈಕಲ್ ಕೊಡುತ್ತಾನೆ. ರಿಚಿ ಸೈಕಲ್ ದೂಡಿಕೊಂಡು ಗಿರಾಕಿಗಳು ಕಿಕ್ಕಿರಿದು ನಿಂತ ಹೊರ ಬಾಗಿಲಿಗೆ ಬರುತ್ತಾನೆ. ಮಾರಿಯಾ ಅಲ್ಲಿ ಕಾದು ನಿಂತಿದ್ದಾಳೆ. ಇಬ್ಬರೂ ಹೊರಡುತ್ತಾರೆ.

ಕ್ಷಯ–ವರ್ಧನ

ರಿಚಿ ಸೈಕಲ್‌ನ್ನು ಹೆಗಲ ಮೇಲಿಟ್ಟು ಪೋಸ್ಟರ್ ಕಛೇರಿಯ ಮೆಟ್ಟಿಲುಗಳನ್ನು ಏರುತ್ತಿದ್ದಾನೆ. ಕಾರಿಡಾರಿನಲ್ಲಿ ರಿಚಿ ನಡೆಯುತ್ತಿರುವಂತೆ ಕೆಮೆರಾ ಲಾಳ ತಿರುಗುತ್ತದೆ. ಮಬ್ಬಾದ ಬೆಳಕಿರುವ ಆ ಕಾರಿಡಾರಿನ ಗೋಡೆಯ ಮೇಲೆ ಅನೇಕ ಬಗೆಯ ಪೋಸ್ಟರ್‌ಗಳನ್ನು ಅಂಟಿಸಲಾಗಿದೆ. ಏಣಿಯನ್ನು ಹೆಗಲಮೇಲೆ ಹೊತ್ತ ಒಬ್ಬ ಇವನನ್ನು ಹಾದು ಹೋಗುತ್ತಾನೆ. ರಿಚಿ ಮೇಜೊಂದರ ಹತ್ತಿರ ನಿಂತ ಒಬ್ಬನ ಹತ್ತಿರ ಹೋಗುತ್ತಾನೆ.

ಉತ್ಸಾಹದ ಸಂಗೀತದ ಜೊತೆಗೆ ಹಿನ್ನೆಲೆಯಲ್ಲಿ ಚಿತ್ರದ ಪ್ರಾರಂಭದಲ್ಲಿ ಕೇಳಿದ ವಸ್ತುಸಂಗೀತ ಕೇಳಿ ಬರುತ್ತದೆ.

ರಿಚಿ : ಬಾಸ್ ಎಲ್ಲಿದಾರೆ ?

ಅಲ್ಲಿದ್ದವ : (ತೋರಿಸುತ್ತ) ಅಲ್ಲಿ. ಸೈಕಲ್ ಬದಿಗೆ ಇಡು.

ಕೆಮೆರಾ ಲಾಳ ತಿರುಗಿದಂತೆ ರಿಚಿ ಸೈಕಲ್ಲನ್ನು ಹೊತ್ತುಕೊಂಡೇ ಒಂದು ತೆರೆದ ಬಾಗಿಲ ಸಮೀಪ ಹೋಗುವುದು ಕಾಣುತ್ತದೆ. ಆತ ಅಸ್ತವ್ಯಸ್ತವಾದ ಒಂದು ಕೋಣೆಯನ್ನು ಹೋಗುತ್ತಾನೆ. ಬಾಸ್ ಅಲ್ಲಿ ಮುಖ್ಯ ಸ್ಥಾನದಲ್ಲಿ ಕುಳಿತಿರುವುದು ಕಾಣುತ್ತದೆ. ಬೊಕ್ಕತಲೆಯ ಆ ವ್ಯಕ್ತಿ ತಲೆಯೆತ್ತಿ ಕನ್ನಡಕದ ಸಂದಿನಿಂದ ರಿಚಿಯನ್ನು ದಿಟ್ಟಿಸುತ್ತಿರುವ ಮಧ್ಯ ಚಿತ್ರಿಕೆ ಕಾಣುತ್ತದೆ.

ಬಾಸ್ : ಆ ಸೈಕಲ್ ಅಲ್ಲೇ ಕೆಳಗಿಡು.

ರಿಚಿ : (ಸೈಕಲ್ ಕೆಳಗಿಡುತ್ತ) ನಾನು ರಿಚಿ ಆಂಟೋನಿಯೋ. ವೆಲ್‌ಮೇಲಿಯಾನಾದ ಕಾರ್ಮಿಕ ಅಧಿಕಾರಿ ನನ್ನನ್ನಿಲ್ಲಿ ಕಳಿಸಿದಾರೆ.

ರಿಚಿ ಜೇಬಿನಿಂದ ಕಾರ್ಡ್ ತೆಗೆಯಲು ಕೈಹಾಕಿ ಏನೋ ಭಯ ಹುಟ್ಟಿದಂತೆ ಹಾಗೇ ನಿಲ್ಲುತ್ತಾನೆ. ಆ ಅಧಿಕಾರಿ ರೆಕಾರ್ಡನ್ನು ಹುಡುಕುತ್ತಿರುವ ಮಧ್ಯ ಚಿತ್ರಿಕೆ ಕಾಣುತ್ತೇವೆ. ಕಡತ ಹುಡುಕುತ್ತಲೇ ಬಾಸ್ ರಿಚಿಗೆ ಮುಂದೆ ಬರಲು ಸನ್ನೆ ಮಾಡುತ್ತಾನೆ.

ಬಾಸ್ : (ತನ್ನಷ್ಟಕ್ಕೆ) ಒಹೋಹೋ. ಸರಿ .... ಸರಿ.... ಇದು ಇಲ್ಲಿ ಬಂತು.

ರಿಚಿ ಸೈಕಲ್ಲನ್ನು ಸ್ವಲ್ಪ ಮುಂದೆ ತಳ್ಳಿಕೊಳ್ಳುತ್ತಾನೆ. ಕೆಮೆರಾದಲ್ಲಿ ರಿಚಿಯ ಸಮೀಪ ಚಿತ್ರ ಮತ್ತು ಬಾಸ್‌ನ ಪಾರ್ಶ್ವ ಚಿತ್ರ ಕಾಣುತ್ತಿದೆ.

ಬಾಸ್ : ನೀನು ನಾಳೆ ಬೆಳಗಿಂದ ಕೆಲಸ ಪ್ರಾರಂಭಿಸಬಹುದು. ಉಗ್ರಾಣಕ್ಕೆ ಹೋಗಿ ಸಾಮಾನೆಲ್ಲಾ ತಗೋ.

ರಿಚಿ : (ಮುಂದೆ ಬಾಗಿ) ಆಗಲಿ. ಬರುತ್ತೇನೆ.

ರಿಚಿ ತಲೆಯ ಮೇಲೆ ಹ್ಯಾಟ್ ಇಟ್ಟುಕೊಂಡು ಸೈಕಲ್ಲಿನ ಸಮೇತ ಬಾಗಿಲಿನ ಕಡೆ ನಡೆಯುತ್ತಿರುವ ದೂರಚಿತ್ರ. ಬಾಗಿಲಲ್ಲಿ ಒಬ್ಬ ಮನುಷ್ಯ ನಿಂತಿದ್ದಾನೆ.

ರಿಚಿ : ಬರುತ್ತೇನೆ.

ವ್ಯಕ್ತಿ : ಆಗಲಿ, ಮತ್ತೆ ಸಿಗೋಣ.

ಕ್ಷಯ–ವರ್ಧನ

ರಸ್ತೆಯ ಬದಿಗೆ ಕಾಯುತ್ತಿರುವ ಮಾರಿಯಾಳ ಸಮೀಪಮಧ್ಯಚಿತ್ರ. ಕಾಯುತ್ತ ನಿಂತ ಅವಳು ರಿಚಿ ಬಂದುವನ್ನು (ಚೌಕಟ್ಟಿನ ಹೊರಗೆ) ಕಂಡಂತೆ ಮೆಲುನಕ್ಕು ಓಡಿ ಚೌಕ

ದಿಂದ ಮರೆಯಾಗುತ್ತಾಳೆ. ಅನಂತರ ರಿಚಿ ಒಂದು ಕೈಯಲ್ಲಿ ಸೈಕಲ್ ಮತ್ತೊಂದು ಕೈಯಲ್ಲಿ ಒಂದು ಪ್ಯಾಕೆಟ್ ಹಿಡಿದು ಹೊರ ಬರುತ್ತಿರುವ ದೂರ ಚಿತ್ರ ಕಾಣುತ್ತದೆ. ಹೊರ ಬರುವಾಗ ಅಲ್ಲಿ ನಿಂತ ನೌಕರನೊಬ್ಬನಿಗೆ ಆತ ಸನ್ನೆ ಮಾಡುತ್ತಾನೆ.

ನೌಕರ : ನಾಳೆ ಆರುವುಕ್ಕಾಲಿಗೆ, ನೆನಪಿದೆಯಲ್ಲ ?

ರಿಚಿ : ಹೂಂ. ಖಂಡಿತ.

ಮಾರಿಯಾ ಗಂಡನ ಹತ್ತಿರ ಬರುತ್ತಾಳೆ. ಕೆಮೆರಾ ಅವರ ಸಮೀಪ ಮಧ್ಯ ಚಿತ್ರ ಕಾಣಿಸುತ್ತದೆ.

ಮಾರಿಯಾ : ಸರಿಯಾಯ್ತಾ ಎಲ್ಲಾ ?

ರಿಚಿ : ನೀನು ಇಷ್ಟು ಹೊತ್ತು ಕಾಯ್ತಿದ್ದೆಯ ? ....ಕೆಲಸ ಎಲ್ಲ ಆಯ್ತು.

ಮಾರಿಯಾ : (ಸಂತೋಷದಿಂದ ಅವನ ಕೈಯಲ್ಲಿರುವ ಪ್ಯಾಕೆಟ್ ನೋಡುತ್ತ) ಏನಿದೆ ಅದರೊಳಗೆ ?

ರಿಚಿ : (ಅವಳಿಗೆ ಕೊಡುತ್ತ) ನಿನಗೊಂದು ಸ್ವಲ್ಪ ಕೆಲಸ.

ರಿಚಿ ತನ್ನ ಹ್ಯಾಟ್ ತೆಗೆದು ಪ್ಯಾಕೆಟ್ ಮೇಲಿಟ್ಟು ತನ್ನ ಕೆಲಸದ ಹ್ಯಾಟ್ ಧರಿಸುತ್ತಾನೆ. ಅದು ಆತನ ತಲೆಯ ಅಳತೆಗಿಂತ ಸ್ವಲ್ಪ ಸಡಿಲವಾಗಿದೆ.

ರಿಚಿ : ಈ ಪಟ್ಟಿ ಸ್ವಲ್ಪ ಬಿಗಿ ಮಾಡಬೇಕು.

ಮಾರಿಯಾ ಹರ್ಷ ಮೆಚ್ಚುಗೆಗಳಿಂದ ಗಂಡನನ್ನು ನೋಡುತ್ತಿದ್ದಾಳೆ.

ರಿಚಿ : (ಮೆಲುನಗುತ್ತ) ಚೆನ್ನಾಗಿ ಕಾಣುತ್ತಾ ನಂಗೆ ?

ಮಾರಿಯಾ ನಗುತ್ತಾಳೆ. ರಿಚಿ ಹೊಸ ಟೋಪಿ ಒಳಗಿಟ್ಟು ಮತ್ತೆ ಹಳೆಯದನ್ನು ಧರಿಸುತ್ತಾನೆ. ಮಾರಿಯಾಳ ತೋಳು ಹಿಡಿದು ಸ್ವಲ್ಪ ಮೇಲ್ಭಾಗದಲ್ಲಿರುವ ಒಂದು ಕಿಟಕಿಯತ್ತ ಕರೆದೊಯ್ಯುತ್ತಾನೆ.

ರಿಚಿ : ನಿನಗೆ ಏನೋ ತೋರಿಸ್ತೇನೆ.

ಸೈಕಲ್ಲನ್ನು ಗೋಡೆಗೆ ಒರಗಿಸಿಟ್ಟು, ಅವಳಿಗೆ ಕಿಟಕಿಯಾಚೆ ಒಳಭಾಗ ಕಾಣುವಂತೆ ಆಕೆಯನ್ನು ಟೊಂಕ ಹಿಡಿದು ಎತ್ತುತ್ತಾನೆ.

ರಿಚಿ : ನೋಡು. ಅಲ್ಲಿ, ಪ್ರತಿಯೊಬ್ಬರಿಗೂ ಅವರವರು ಉಪಯೋಗಿಸೋಕೆ ಬೀಗ ಹಾಕ್ಕೊಳ್ಳೋ ಬೀರು ಕೊಟ್ಟಿರ್ತಾರೆ. ಎಷ್ಟು ಚೆನ್ನಾಗಿರತ್ತೆ ಅಲ್ವಾ ?

ಒಳಗಿನಿಂದ ಯಾರೋ ಕಿಟಕಿಯ ಬಾಗಿಲನ್ನು ಬಡಿದು ಮುಚ್ಚುತ್ತಾರೆ. ರಿಚಿ ಮಾರಿಯಾಳನ್ನು ಇಳಿಸುತ್ತಾನೆ.

ಪ್ಯಾಕೆಟ್ಟನ್ನು ಸೈಕಲ್ಲಿನ ಹಿಂದೆ ಕಟ್ಟುತ್ತಾನೆ.

ರಿಚಿ : ಮುಂಚೆ ಆ ಷೂನೂ ಕೊಡ್ತಿದ್ದರಂತೆ........ ಹೇಗೂ ಸಂಬಳ ಚೆನ್ನಾಗಿದೆ. ಹದಿನೈದು ದಿನಕ್ಕೆ ಆರುಸಾವಿರ. ಅಲ್ಲದೆ ಸಂಸಾರ ಭತ್ಯ ಬೇರೆ. ಓವರ್ ಟೈಮೂ ಸಿಗುತ್ತೆ.

ಹೊರಡುತ್ತಾರೆ. ರಿಚಿ ಮಾರಿಯಾಳನ್ನು ಸೈಕಲ್ಲಿನ ಬಾರ್ ಮೇಲೆ ಕೂರಿಸಿ ಕೊಳ್ಳುತ್ತಾನೆ.

ಮಾರಿಯಾ : ಪಗಲಿಯಾ ದಾರೀಲಿ ಸ್ವಲ್ಪ ನಿಂತು ಹೋಗೋಣವಾ ?

ರಿಚಿ : (ಆಶ್ಚರ್ಯದಿಂದ) ಅಲ್ಲೇನು ಕೆಲಸ ?

ಮಾರಿಯಾ : ಏನಿಲ್ಲ ಒಬ್ಬ ಹೆಂಗಸನ್ನು ನೋಡೋದಿದೆ.

ರಿಚಿ : (ಹುಸಿಕೋಪದಿಂದ) ಹೆಂಗ್ಸನ್ನಾ ?

ಮಾರಿಯಾ : ಹೂಂ. ಹೆಂಗಸು.

ಅವರ ಸೈಕಲ್ ಚೌಕದಿಂದ ಮರೆಯಾಗುತ್ತದೆ.

ಮತ್ತೆ ಅವರು ಸೈಕಲ್ ಮೇಲೆ ಹೋಗುತ್ತಿರುವ ದೂರ ಚಿತ್ರ ಬೆನ್ನಕಡೆಯಿಂದ ಕಾಣುತ್ತದೆ. ಸೈಕಲ್ಲಿನ ಗಂಟೆ ಬಾರಿಸುತ್ತಿದೆ.

ಇನ್ನೊಂದು ರಸ್ತೆಯ ದೂರಚಿತ್ರ. ಸೈಕಲ್ ಮೇಲೆ ಬಂದು ಅವರು ಮನೆಯೊಂದರ ಬಾಗಿಲಲ್ಲಿ ನಿಲ್ಲುತ್ತಾರೆ. ರಿಚಿ ಕಾಲೂರುತ್ತಿದ್ದಂತೆ ಮಾರಿಯಾ ಜಿಗಿಯುತ್ತಾಳೆ.

ಹಿನ್ನೆಲೆಯಲ್ಲಿ ಉಲ್ಲಾಸದ ಸಂಗೀತ.

ಮಾರಿಯಾ : ನಿಂತಿರು ಒಂದ್ನಿಮಿಷ. ಬರ್ತೀನೆ.

ರಿಚಿ : ಯಾರಿದಾರೆ ಇಲ್ಲಿ ?

ಮಾರಿಯಾ : (ತ್ವರೆಯಿಂದ) ಹೇಳಿದ್ನಲ್ಲ ಅಗ್ಲೇ............ (ಬಾಗಿಲಕಡೆ ನಡೆಯುತ್ತ) ಒಂದು ನಿಮಿಷದಲ್ಲಿ ಬರ್ತೀನೆ.

ರಿಚಿ : ಆದ್ರೆ ಮಾರಿಯಾ....

ಮಾರಿಯಾ : (ಎರಡು ಹೆಜ್ಜೆ ಹಿಂತಿರುಗಿ) ಬೇಗ ಬರ್ತೀನೆ. ಅಂದ್ನಲ್ಲ.

ಮಾರಿಯಾ ಒಳಾಂಗಣದಲ್ಲಿ ಕಾಣುವ ಪಾವಟಿಕೆಗಳನ್ನು ಹತ್ತುತ್ತಿದ್ದಾಳೆ. ರಿಚಿ ಬೈಸಿಕಲ್ ಗೋಡೆಗೊರಗಿಸಿ ಹೆಂಡತಿ ಕಡೆ ನೋಡುತ್ತಾನೆ.

ರಿಚಿ : ತಡ ಮಾಡಬೇಡ ಮತ್ತೆ.

ಕೆಮೆರಾ ಮೇಲ್ಮುಖ ಮಾಡಿ ಮಾರಿಯಾ ಹತ್ತುವುದನ್ನು ಕಾಣಿಸುತ್ತದೆ. ಮೆಟ್ಟಲಿನ ಮೊದಲ ನೆಲೆ ಏರಿ ಪಕ್ಕದ ತೆರೆದ ಬಾಗಿಲಿನಲ್ಲಿ ಮಾರಿಯಾ ಮರೆಯಾಗುತ್ತಾಳೆ.

ರಿಚಿ ಜೇಬಿನಿಂದ ಒಂದು ಸಿಗರೇಟ್ ತೆಗೆದು ಹೊತ್ತಿಸುತ್ತಿರುವುದನ್ನು ಕೆಮೆರಾ ಮೆಟ್ಟಿಲ ಮೇಲೆ ನೆಲೆಯಲ್ಲಿ ನಿಂತು ಕೆಳಮುಖವಾಗಿ ಕಾಣಿಸುತ್ತಿದೆ. ........ ಒಬ್ಬ ಹುಡುಗ ಫಕ್ಕನೆ ಚೌಕಟ್ಟಿನೊಳಗೆ ಓಡಿ ಬರುತ್ತಾನೆ. ಎರಡು ಮೂರು ಕಲ್ಲುಗಳು ಹಿಂದಿನಿಂದ ಬಂದು ರಸ್ತೆಯ ಬದಿಗೆ ಬೈಸಿಕಲ್ ಸಮೀಪ ಬೀಳುತ್ತವೆ. ಜೊತೆಗೇ ರಸ್ತೆಯಲ್ಲಿ ಆಡುವ ೨-೩ ಹುಡುಗರು ಬರುತ್ತಾರೆ.

ಹುಡುಗ ೧ : ನೋಡು ಅದು ನಂದು.

ಹುಡುಗ ೨ : ಊಹೂಂ. ನಂದು ಅದು.

ಸಿಗರೇಟ್ ಹೊತ್ತಿಸುತ್ತಿರುವ ರಿಚಿ ಹೌದೆನ್ನುವಂತೆ ಸನ್ನೆ ಮಾಡುತ್ತಾನೆ.

ಹುಡುಗ ೨ : ಸರಿ. ಇರಲಿ ಬಿಡು. ಈಗ ಬೇರೆ ಆಟ. ಈ ಸಾರಿ ಮಾತ್ರ........

ಹುಡುಗರ ಗುಂಪು ಚೌಕದಿಂದ ಮರೆಯಾಗುತ್ತದೆ. ರಿಚಿ ಮೆಲುನಗುತ್ತಿದ್ದಾನೆ. ಈಗ ಅಲ್ಲಿಗೆ ಮೂರು ಜನ ಹೆಂಗಸರು ಬರುತ್ತಾರೆ. ಕಪ್ಪು ಬಟ್ಟೆತೊಟ್ಟಿದ್ದಾರೆ. ಅವರ ಪೈಕಿ ಒಬ್ಬಳು ಸೂತಕ ವಸ್ತ್ರದಲ್ಲಿದ್ದಾಳೆ. ಬರುತ್ತಿದ್ದವರೇ ಆಳು ಎಲ್ಲಿದ್ದಾನೆಂದು ಹುಡುಕುತ್ತಾರೆ.

ಒಬ್ಬ ಹೆಂಗಸು : Porter........Porter........ ಯಾರಿದಾರೆ ಇಲ್ಲಿ ?

ಒಬ್ಬ ಹೆಂಗಸು ರಿಚಿಯ ಸಮೀಪ ಬರುತ್ತಾಳೆ.

ಹೆಂಗಸು : ಸೆನೋರಾ ಸಂತೋನಾ ಇಲ್ಲೇ ಇರೋದು ಅಲ್ವಾ ?

ರಿಚಿ : (ಗೊತ್ತಾಗದೆ) ಸೆನೋರಾ ಸಂತೋನಾ ?

ಹೆಂಗಸು : ಹೂಂ. ಅದೇ ಭವಿಷ್ಯಗಾರ್ತಿ.

ರಿಚಿ : ಗೊತ್ತಿಲ್ಲ ನನಗೆ. ನಾನು ಇಲ್ಲಿ ಇರೋವನಲ್ಲ.

ಆ ಹೆಂಗಸು ಉಳಿದಿಬ್ಬರ ಹತ್ತಿರ ಹೋಗುತ್ತಾಳೆ.

ಹೆಂಗಸು : (ಉಳಿದಿಬ್ಬರಿಗೆ) ಮಹಡಿಗೆ ಹೋಗಿ ನೋಡೋಣ.

ಅವರು ಮಹಡಿ ಹತ್ತಿ ಮರೆಯಾಗುತ್ತಾರೆ. ಕುತೂಹಲದಿಂದ ರಿಚಿ ಅವರನ್ನು ಅನುಸರಿಸುತ್ತಾನೆ. ಕೆಮೆರಾ ಮೇಲ್ಮುಖವಾಗಿ ಮಾರಿಯಾ ಹೋದಲ್ಲಿಗೆ ಇವರು ಹೋಗುತ್ತಿರುವುದನ್ನು ತೋರಿಸುತ್ತದೆ. ರಿಚಿ ಅರ್ಧ ಮೆಟ್ಟಿಲುಗಳನ್ನು ಏರುತ್ತಾನೆ. ಅಲ್ಲಿಂದ ರಿಚಿಗೆ ತನ್ನ ಸೈಕಲ್ಲಿನ ಸಮೀಪವೇ ಆ ಬೀದಿಯ ಹುಡುಗರು ಕಲ್ಲು ಆಡುತ್ತಿರುವುದು ಕಾಣಿಸುತ್ತದೆ.

ಹುಡುಗ : ಮತ್ತೆ ನಂದೇ.

ಇನ್ನೊಬ್ಬ : ನಿಲ್ಲು ಅಳತೆ ಮಾಡೋಣ.

ರಿಚಿ ನಿಂತ ಜಾಗದಿಂದ ಎಂದರೆ, ಮೆಟ್ಟಿಲ ಮೊದಲ ನೆಲೆಯಿಂದ ಕೆಮೆರಾ ಕೆಳಮುಖವಾಗಿ ರಸ್ತೆಯ ತನಕ ಕಾಣಿಸುತ್ತಿದೆ. ಮಹಡಿಯಲ್ಲಿ ಒಂದು ಕೋಣೆಯ ಬಾಗಿಲಿಂದ ಒಬ್ಬ ಹೆಂಗಸು ಕರ್ಚೀಫನ್ನು ಕಣ್ಣಿಗೆ ಮುಚ್ಚಿಕೊಂಡು ಅಳುತ್ತಾ ಮೆಟ್ಟಲಿಳಿದು ಹೋಗುತ್ತಿರುವುದು ಕಾಣುತ್ತದೆ. ರಿಚಿ ತನ್ನನ್ನು ಹಾದು ಹೋಗುತ್ತಿರುವ ಆಕೆಯನ್ನು ನೋಡುತ್ತಾನೆ.

ರಿಚಿ : (ಮಕ್ಕಳಿಗೆ) ಲೋ. ಆ ಸೈಕಲ್ ಸ್ವಲ್ಪ ನೋಡ್ತಾ ಇರಿ.

ಮಕ್ಕಳು : ಹಾಂ. ಹಾಂ. ಆಗಲಿ.

ರಿಚಿ ಬಾಗಿಲು ದಾಟಿ ಭವಿಷ್ಯಗಾರ್ತಿ ಸೆನ್ಯೋರ ಸಂತೋನಾ ಇರುವ ಕೋಣೆಯ ಕಡೆ ಅಳುಕುತ್ತ ಅಳುಕುತ್ತ ಹಿಜ್ಜೆಯಿಡುತ್ತಿದ್ದಾನೆ. ಕೆಮೆರಾ ಮುಂಬದಿಯಿಂದ ಅವನನ್ನು ಗ್ರಹಿಸುತ್ತ ಅವನ ಜೊತೆಗೇ ಹಿಂದಕ್ಕೆ ಸರಿಯುತ್ತಿದೆ. ಕಾರಿಡಾರ್‌ನ ಬದಿಗೆ ಒಂದು ಬಾಗಿಲು. ರಿಚಿ ನಿಲ್ಲುತ್ತಾನೆ. ಕೆಮೆರಾ ನಿಲ್ಲುತ್ತದೆ. ಅರೆತೆರೆದ ಬಾಗಿಲಿಂದ ಒಬ್ಬ ಹೆಂಗಸು ಸ್ಟೋವ್‌ನ ಬುಡದಲ್ಲಿ ಕೆಲಸಮಾಡುತ್ತಿರುವ ಮಧ್ಯದೂರ ಚಿತ್ರ ಕಾಣುತ್ತಿದೆ. ರಿಚಿ ಮಧ್ಯ ಚಿತ್ರಿಕೆಯಲ್ಲಿದ್ದಾನೆ.

ಹೆಂಗಸು : (ತಿರುಗದೆಯೇ) ಮುಂದೆ, ಕಡೇ ಬಾಗಿಲು.

ರಿಚಿ ತಲೆಯಿಂದ ಹ್ಯಾಟ್ ತೆಗೆದು ಮುಂದುವರೆಯುತ್ತಾನೆ. ಹಿಂದಿನಂತೆಯೇ ಕೆಮೆರಾ ಅನುಸರಿಸುತ್ತದೆ.

ಸೆನ್ಯೋರಾ ಸಂತೋನಾಳ ಕೋಣೆಯಿಂದ ಮಾತುಗಳು ಅಸ್ಪಷ್ಟವಾಗಿ ಕೇಳಿ ಬರುತ್ತಿದೆ. (ಎಲ್ಲವೂ ಹೊರಗಿನಿಂದ)

ಸಂತೋನಾ : ಈಗ ಹೇಗಿದ್ದಾನೆ. ಅವನು ?

ಹೆಣ್ಣು : ಅವನಿಗೆ ಖಾಯಿಲೆಯಾಗಿ ಒಂದು ವರ್ಷಾನೇ ಕಳೀತು.

ಸಂತೋನಾ : ಡಾಕ್ಟರ್‌ಗೆ ತೋರಿಸಬಹುದಿತ್ತಲ್ಲ. ?

ಹೆಣ್ಣು : ತೋರಿಸಿದ್ವಿ. ಅವರು ಏನೂ ಮಾಡೋಕಾಗಲ್ಲ. ಅಂದ್ರು.

ಸಂತೋನಾ : ಅವನನ್ನು ಇಲ್ಲೀ ಕರ್ಕೊಂಬರ ಬೇಕಿತ್ತು.

ಹೆಣ್ಣು : ಹ್ಯಾಗೆ ? ಅಲುಗೋದಕ್ಕೂ ಆಗೋದಿಲ್ಲ. ಅವನಿಗ ....ಏನಾದ್ರೂ ಮಾಡಿ.... ದಯತೋರಿಸಿ.

ರಿಚಿ ಮೆಲುನಡಿಗೆಯಲ್ಲಿ ಬಾಗಿಲ ಸಮೀಪ ಹೋಗಿ ಅವಿತುಕೊಂಡು ಇಣುಕುತ್ತಾನೆ. ಭವಿಷ್ಯಕಾರ್ತಿಯ ಕೋಣೆ ಕಾಣುತ್ತದೆ. ಮಧ್ಯಮ ವರ್ಗದ ಪೀಠೋಪಕರಣಗಳು,

ಚಿತ್ರ, ಕಾಣಿಕೆದೀಪ ಇತ್ಯಾದಿ. ದೊಡ್ಡ ಮಂಚದ ಹಾಸಿಗೆಯಲ್ಲಿ ಭವಿಷ್ಯಕಾರ್ತಿ ಸೆನೋರಾ ಸಂತೋನಾ ಕೊತಿದ್ದಾಳೆ. ಅವಳಿಗೊಬ್ಬ ಎಳೆಹರಿಯದ ಸಹಾಯಕಿ. ಕೋಣೆಯ ತುಂಬಾ ಜನರ ಗುಂಪು. ಎಲ್ಲರೂ ಆಕೆಯ ಸಲಹೆಗೆ ಕಾದು ಕುಳಿತವರು. ಸೆನೋರಾ ಸಂತೋನಾ ಕೈಗಳನ್ನು ಮೇಲಕ್ಕೆತ್ತಿದ್ದಾಳೆ.

ಸಹಾಯಕಿ : (ಯಾಂತ್ರಿಕವಾಗಿ ಕೈಯಾಡಿಸುತ್ತ ಗಿರಾಕಿಯನ್ನು ದ್ದೇಶಿಸಿ) ಇದು ಹೌದು....ಇದು ಅಲ್ಲ.

ಸಂತೋನಾ : ಪ್ರಭು. ನನಗೆ ಜ್ಯೋತಿಯನ್ನು ಕರುಣಿಸು.

ರಿಚಿ ಉದ್ವೇಗದಿಂದ ಇಣುಕಿ ನೋಡುತ್ತಿರುವ ಮಧ್ಯ ಸಮೀಪ ಚಿತ್ರ. ನಂತರ ಭವಿಷ್ಯಕಾರ್ತಿ ಮತ್ತು ಗಿರಾಕಿಗಳ ದೂರಚಿತ್ರ.

ಸಂತೋನಾ : ಏಳುತ್ತಾನೆ. ಎಲೆಗಳು ಉದುರೋದಕ್ಕೆ ಮುಂಚೆ ನಿನ್ನ ಮಗ ಏಳ್ತಾನೆ........

ಹೆಣ್ಣು : ಅಂದರೆ ?

ಕೋಣೆಯಲ್ಲಿ ಮಾರಿಯಾ ಕೂಡಾ ಇರುವುದನ್ನು ರಿಚಿ ಕಾಣುತ್ತಾನೆ.

ರಿಚಿ : (ಮೆತ್ತಗೆ) ಮಾರಿಯಾ.

ಮಾರಿಯಾ ತಿರುಗುತ್ತಾಳೆ, ಅವಳಿಗೆ ಕರೆದದ್ದು ಕೆಡುಕೆನಿಸಿದೆ.

ಸಂತೋನಾ : (ಹೊರಗಿಂದ) ಅಂಪ್ರೆ.... ನಿನ್ನ ಮಗ ಮಾಗಿಯ ಹೊತ್ತಿಗೆ ಸರಿಯಾಗ್ತಾನೆ.

ರಿಚಿ : ಮಾರಿಯಾ, ಬಾ, ಹೊಗೋಣ.

ಮಾರಿಯಾ ಅಸಹನೆಯಿಂದ ಇಲ್ಲ ಅನ್ನುವಂತೆ ಮೈ ಕೊಡವುತ್ತಾಳೆ.

ಹೆಂಗಸು : ನಿಮ್ಮಿಂದ ಉಪಕಾರವಾಯಿತು.

ರಿಚಿ : (ಸಿಟ್ಟಾಗುತ್ತ) ಮಾರಿಯಾ, ಹೋಗೋಣ ಬಾ.

ಸಂತೋನಾ : (ಹೊರಗಿಂದ) ನಿನಗೇನು ಆಗಬೇಕು ?

ಇನ್ನೊಬ್ಬಳು : ನನ್ನ ಅತ್ತಿಗೆಗೆ ಖಾಯಿಲೆ.

ರಿಚಿ : ಮಾರಿಯಾ !

ಸಂತೋನಾ : ಪ್ರಭು. ನನಗೆ ಜ್ಯೋತಿಯನ್ನು ಕರುಣಿಸು.

ಮುಂದೆ ಗಲಾಟೆಯಾದೀತೆಂದು ಮಾರಿಯಾ ಗಂಡನ ಕಡೆಗೆ ಬರುತ್ತಿರುವುದನ್ನು ಕೆಮೆರಾ ರಿಚಿಯ ಸ್ಥಾನದಿಂದ ಮಧ್ಯ ಚಿತ್ರಿಕೆಯಲ್ಲಿ ಗುರುತಿಸುತ್ತದೆ. ಆಕೆಗೆ ಸಿಟ್ಟು ಬಂದಿದೆ. ಬಾಗಿಲು ಮುಚ್ಚಿಕೊಂಡು ಹೊರ ಹೊರಡುವಾಗ ಕೆಮೆರಾ ಹಿಂದೆ ಸರಿದು ಆಕೆಯನ್ನು ಅನುಸರಿಸುತ್ತದೆ.

ಸಂಗೀತ ನಿಲ್ಲುತ್ತದೆ.

ಗಂಡ ಹೆಂಡತಿ ಕಾರಿಡಾರ್‌ನಲ್ಲಿ ನಿಂತಿರುವ ಮಧ್ಯ ಸಮಿಪ ಚಿತ್ರ.

ರಿಚಿ : (ಹೆಂಡತಿಯನ್ನು ಹೊರಗೆ ಎಳೆದೊಯ್ಯುತ್ತ) ನಡಿ ಹೋಗೋಣ. ಏನ್ ಮಾಡ್ತಿದೀಯಾ ಅಲ್ಲಿ ?

ಮಾರಿಯಾ : ಏನಿಲ್ಲ. ನಾನು ಅವರಿಗೆ ಐವತ್ತು ಲೈರ್ ಕೊಡಬೇಕು.

ರಿಚಿ : (ಮಗುವಿಗೆ ಹೇಳುವಂತೆ) ಹುಚ್ಚಿ ನೀನು.

ಮಾರಿಯಾ : ನಿನಗೆ ಕೆಲಸ ಸಿಗತ್ತೆ ಅಂದಿದ್ದಳು ಅವಳು. ಸಿಗ್ತು. ಈಗ ಕೊಡಬೇಕಲ್ಲ.

ರಿಚಿ : ಈಗ ನಾನೇ ಹೋಗಿ ಅವಳಿಗೆ ಉತ್ತರ ಹೇಳ್ತೀನೆ.

ಮಾರಿಯಾ : ಹೋಗಲಿ ಬಿಡು. ನಡಿ ಹೋಗೋಣ.

ಹೊರಡುತ್ತಾರೆ. ಕೆಮೆರಾ ಹಿಂದಕ್ಕೆ ಚಲಿಸುತ್ತ ಅವರನ್ನು ಅನುಸರಿಸುತ್ತದೆ.

ರಿಚಿ : ಎರಡು ಮಕ್ಕಳ ತಾಯಿ ನೀನು. ತಲೆ ಅನ್ನೋ-ದೊಂದಿದ್ರೆ ಹ್ಯಾಗೆ ಇದೆಲ್ಲ ನಂಬ್ತಿಯ ? ಇದು ದಗಾ. ಜನರ ಬದುಕಿನ ಮೇಲೆ ಈ ಯಕ್ಷಿಣಿ ಹೆಂಗಸರ ಅಧಿಕಾರ. ಇದು ಹುಚ್ಚುತನ.

ಕಾರಿಡಾರಿನಲ್ಲಿ ನಡೆಯುತ್ತ ಅಡುಗೆ ಕೋಣೆಯ ಬಳಿ ಬಂದಾಗ ಮೆಲ್ಲನೆ ಮಾರಿಯಾ ಕದ್ದು ಒಳ ಹೊಕ್ಕು ಮೇಜಿನ ಮೇಲೆ ಹಣ ಇಟ್ಟು ಬರುತ್ತಾಳೆ. ಹೆಂಗಸು ನೋಡುತ್ತಾಳೆ, ಮಾತಾಡುವುದಿಲ್ಲ. ಹಿಂತಿರುಗಿ ಬಂದು ರಿಚಿಯ ಕೈಹಿಡಿದು ಬಾಗಿಲಕಡೆ ಬರುತ್ತಾಳೆ. ಮೆಟ್ಟಿಲಕಡೆ ರಸ್ತೆಯಲ್ಲಿರುವ ಕೆಮೆರಾ, ಇವರು ಇಳಿದು ಬರುವುದನ್ನು ಕಾಣಿಸುತ್ತದೆ.

ರಿಚಿ : ನಿನಗೆ ಬೇರೆ ಏನೂ ಸಿಗಲಿಲ್ಲವಾ ದುಡ್ಡು ದಂಡ ಮಾಡಲಿಕ್ಕೆ ?

ಮಾರಿಯಾ : ಅದು ನಮ್ಮ ಧರ್ಮ.

ರಿಚಿ : ಅದೆಂಥ ಧರ್ಮ ಸುಮ್ನಿರು.

ಕಟ್ಟಡದ ಹೊರಗೆ ಬರುತ್ತಾರೆ.

ಹಿನ್ನೆಲೆ ಸಂಗೀತ ಪ್ರಾರಂಭವಾಗುತ್ತದೆ.

ರಿಚಿ ಸೈಕಲ್ ಎತ್ತಿ ರಸ್ತೆಗಿಟ್ಟು ಏರುತ್ತಾನೆ. ಮಾರಿಯಾ ಬಾರ್ ಮೇಲೆ ಕೂರುತ್ತಾಳೆ.

ರಿಚಿ : (ಲಘು ಹಾಸ್ಯದಿಂದ) ಹಾಗಾದ್ರೆ ಕೆಲಸ ಹುಡುಕಿದು ನಾನೋ ಅಥವಾ ಅವಳೇನಾ ? ನಿನಗಿನ್ನೂ ಹುಡುಗು ಬುದ್ಧೀನೇ !

ಹೊರಡುತ್ತಾರೆ, ಚೌಕದಿಂದ ಮರೆಯಾಗುತ್ತಾರೆ.

ಕ್ಷಯ–ವರ್ಧನ

ರಸ್ತೆಯಲ್ಲಿ ಅವರಿಬ್ಬರೂ ಸೈಕಲ್ ಸವಾರಿ ಮಾಡಿಕೊಂಡು ಕೆಮೆರಾದ ಕಡೆಗೆ ಬರುತ್ತಿರುವ ದೃಶ್ಯ.

ದೃಶ್ಯ ಕ್ಷೀಣಿಸುತ್ತದೆ.

ರಿಚಿ ಮಾರಿಯಾರ ಮನೆ. ಮಕ್ಕಳ ಕೋಣೆ. ಕಾಲ–ಮಾರನೆಯ ದಿನ ಮುಂಜಾವು.

ಹರ್ಷ ಸಂಗೀತದ ಹಿನ್ನೆಲೆಯ ಜೊತೆಗೆ ಚಿತ್ರದ ವಸ್ತು ಸಂಗೀತ ಕೂಡ ಸೇರಿಕೊಂಡಿದೆ.

ನೇತು ಹಾಕಿರುವ ಸೈಕಲ್ಲಿನ ತಿರುಗುತ್ತಿರುವ ಒಂದು ಚಕ್ರ. ಗಾಡಿಯ ಕಡ್ಡಿಗಳ ಆಚೆ ಬ್ರೂನೋ ಕಾಣುತ್ತಿದ್ದಾನೆ. ಇವನು ರಿಚಿಯ ಹಿರಿಯ ಮಗ. ವಯಸ್ಸು ಸುಮಾರು ಹತ್ತು. ಭಾರೀ ಜತನದಿಂದ ಸೈಕಲ್ಲನ್ನು ಒರೆಸಿ ಹೊಳಪು ಬರುವಂತೆ ಮಾಡುತ್ತಿದ್ದಾನೆ. ಹಿನ್ನೆಲೆಯಲ್ಲಿ ಕೆಲಸದ ಸಮವಸ್ತ್ರ ಧರಿಸಿ ರಿಚಿ ಒಳಬರುವುದು ಕಾಣುತ್ತದೆ.

ರಿಚಿ : ಬೇಗ ಬೇಗ ಬ್ರೂನೋ. ಆರೂವರೆ ಆಯ್ತು.

ಬ್ರೂನೋ : ಒಳಗೆಲ್ಲ ಒರಸೋದಿಕ್ಕೆ ಆಗೋದಿಲ್ಲ. ಇನ್ನೂ ಕತ್ತಲು. ಕಾಣೋದಿಲ್ಲ.

ಬ್ರೂನೋ ಕಿಟಕಿಯ ಬಳಿ ಹೋಗಿ ಬಾಗಿಲು ತೆಗೆದು ಮುಂಜಾವಿನ ಮಂದ ಬೆಳಕು ಒಳ ಬರುವಂತೆ ಮಾಡುತ್ತಾನೆ. ಸೈಕಲ್ ಬುಡಕ್ಕೆ ಬಂದು ಮತ್ತೆ ಒರೆಸತೊಡಗುತ್ತಾನೆ. ಕೆಮೆರಾ ಲಾಳ ತಿರುಗಿ ಅವನನ್ನು ಅನುಸರಿಸಿ ಹಿಂದೆ ಬರುತ್ತದೆ. ಹಿನ್ನೆಲೆಯಲ್ಲಿ ರಿಚಿ ಸೈಕಲ್ಲಿನ ಹತ್ತಿರ ಬರುತ್ತಾನೆ. ಪೆಡಲ್‌ನ್ನು ನೋಡಿ ಬೇಸರಗೊಂಡಂತಿರುವ ಸಮೀಪ ಚಿತ್ರ.

ಬ್ರೂನೋ : ಪಪ್ಪ, ಅವರೇನು ಮಾಡಿದಾರೆ ನೋಡಿದ್ಯಾ ?

ರಿಚಿ : (ಹೊರಗಿನಿಂದ) ಇಲ್ಲ–ಏನು ?

ಬ್ರೂನೋ : (ಕೋಪದಿಂದ ಪೆಡಲ್ ತೋರಿಸುತಾ) ನೋಡು ಹೊಡೆತ ಬಿದ್ದಿದೆ.

ರಿಚಿ ಮೆಲು ನಗುತ್ತ ಲೇಸ್ ಕಟ್ಟಿಕೊಳ್ಳಲು ಹಾಸಿಗೆಯ ಮೇಲೆ ಕೂರುತ್ತಾನೆ.

ರಿಚಿ : ಅದು ಮೊದ್ಲೆ ಇದ್ದಿರಬಹುದು.

ಬ್ರೂನೋ : (ಸಿಟ್ಟಿನಿಂದ) ಊಹೂಂ – ಮೊದ್ಲು ಆಗಿರಲಿಲ್ಲ ನನಗ್ಗೊತ್ತು. ಅಲ್ಲಿ ಹಾಗೇ. ಅವರು ಸರಿಯಾಗಿ ನೋಡಿ ಕೊಳ್ಳೊದಿಲ್ಲ. ನೀನು ಸರಿಯಾಗಿ ನೋಡಿ ತರಬೇಕಿತ್ತು ಈಗ ಏನು ಅವರು ರಿಪೇರಿಗೆ ದುಡ್ಡು ಕೊಡ್ತಾರಾ ?

ರಿಚಿ : (ನಗುತ್ತ) ಆಯ್ತುಲ್ಲ. ಹೋಗಲಿ ಬಿಡು.

ಬ್ರೂನೋ : ಸುಮ್ಮನಿರ್ತೀನೆ, ನಂಗೇನು ? ಆದ್ರೆ ನಾನೇ ಆಗಿದ್ರೆ ಸುಮ್ಮನಿರ್ತಿರಲಿಲ್ಲ.

ಬೆಲ್ಟ್ ಬಿಗಿದುಕೊಳ್ಳುತ್ತ ರಿಚಿ ಅಡುಗೆ ಮನೆ ಕಡೆ ಬರುತ್ತಿರುವುದನ್ನು ಕೆಮೆರಾ ಮುಂದಿನಿಂದ ಗ್ರಹಿಸುತ್ತಿದೆ. ಕೆಮೆರಾ ಲಾಳ ತಿರುಗಿದಾಗ ರಿಚಿ ಮಾರಿಯಾಳ ಹತ್ತಿರ ಹೋಗುವುದು ಕಾಣುತ್ತದೆ. ಟೋಪಿ ರಿಪೇರಿ ಮಾಡುತ್ತಿರುವ ಮಾರಿಯಾ ಮತ್ತು ರಿಚಿಯ ಮಧ್ಯ ಚಿತ್ರ.

ರಿಚಿ : ಮುಗಿಸಿಬಿಟ್ಯಾ ?

ಮಾರಿಯಾ : ಹುಂ.

ಟೇಬಲ್ ಮೇಲೆ ಎರಡು ಪ್ಯಾಕೆಟ್ ಇರುವುದನ್ನು ರಿಚಿ ನೋಡುತ್ತಾನೆ.

ಮಾರಿಯಾ : ತಿಂಡಿ ಪೊಟ್ಟಣ,

ಮಾರಿಯಾ ಟೋಪಿಯನ್ನು ಗಂಡನ ತಲೆಗಿಡುತ್ತಾಳೆ.

ಮಾರಿಯಾ : ನೋಡೋಣ....ಚೆಂದ ಕಾಣ್ತೀಯ.

ರಿಚಿ : ನಾನು ಚೆಂದಾನೇ ಇದೇನೆ.

ಮಾರಿಯಾ : (ಮೆಲುನಗೆ) ಒಳ್ಳೆ ಪೋಲೀಸ್ ಪೇದೆ ಹಾಗೆ ಕಾಣ್ತೆಯಾ ನೋಡು,

ರಿಚಿ ಪ್ರೀತಿಯಿಂದ ಮಾರಿಯಾಳಿಗೆ ಮೆತ್ತಗೆ ಏಟು ಕೊಡುತ್ತಾನೆ. ಅವಳನ್ನು ಎಳೆದು ಅಪ್ಪಿಕೊಳ್ಳುತ್ತಾನೆ. ಮಾರಿಯಾ ಬಿಡಿಸಿಕೊಳ್ಳುತ್ತಾಳೆ. ಕೂದಲು ಸರಿಪಡಿಸಿ ಕೊಳ್ಳುತ್ತಾಳೆ.

ಮಾರಿಯಾ : (ಹುಸಿಕೋಪದಿಂದ) ಹೋಗು ಹೋಗು, ನಿನ ಗಂತೂ ಏನೂ ತಿಳಿಯೋದಿಲ್ಲ. ಆ ಸಣ್ಣಮಗು ಮಲಗಿದೆ. ಎದ್ದುಬಿಟ್ಟೀತು.

ರಿಚಿ ಆಕೆಯ ಕೆನ್ನೆಗೆ ಮುತ್ತಿಟ್ಟು ತಿಂಡಿ ಪ್ಯಾಕೆಟ್ ತೆಗೆದುಕೊಂಡು ಹೊರಡುತ್ತಾನೆ.

ರಿಚಿ : ಬ್ರೂನೋ, ಇದು ನಿನಗೆ. ಆಮೆ ಟ್.

ಬ್ರೂನೋ ಹೆಮ್ಮೆಯಿಂದ ತಂದೆಯ ಹಾಗೇ ಗಾಂಭೀರ್ಯ ಅನುಸರಿಸುತ್ತ ತಿಂಡಿಯ ಪ್ಯಾಕೆಟ್ ಓವರ್ ಕೋಟಿನ ಹೊರಜೇಬಿಗೆ ಸಿಕ್ಕಿಸಿಕೊಳ್ಳುತ್ತಾನೆ. ತಿರುಗಿ ತಲೆ ಬಾಚಿ ಕೊಳ್ಳುತ್ತಾನೆ. ರಿಚಿ ಈಗ ಸೈಕಲ್ಲನ್ನು ಹೆಗಲ ಮೇಲಿಟ್ಟುಕೊಂಡು ಬರುತ್ತಾನೆ. ಕನ್ನಡಿಯೆದುರು ಟೋಪಿ ಸರಿಪಡಿಸಿಕೊಂಡು ಹೊರಡುತ್ತಾನೆ.

ರಿಚಿ : ಬ್ರೂನೋ. ಹೋಗೋಣ.

ತಂದೆ ಕೋಣೆಯಿಂದ ಹೊರಡುತ್ತಿದ್ದಂತೆ ಬ್ರೂನೋ ಕೋಣೆಯ ಆಚೆ ತುದಿಗೆ ನೋಡುತ್ತಾನೆ. ಇವನ ಪುಟ್ಟ ತಂಗಿ ಎರಡು ದಿಂಬುಗಳ ಮಧ್ಯೆ ಮಲಗಿದೆ. ಬ್ರೂನೋ

ಹಿಂದೆ ಬಂದು ಕಿಟಕಿ ಬಾಗಿಲನ್ನು ಮುಚ್ಚುತ್ತಾನೆ, ಕತ್ತಲಾಗುತ್ತದೆ. ತನ್ನ ಮನೆಯ ಹೊರಗೆ ಸೈಕಲ್ ಹೊತ್ತು ರಿಚಿ ಹೊರಟಿದ್ದಾನೆ. ಬ್ರೂನೋ ಅನುಸರಿಸುತ್ತಿದ್ದಾನೆ. ಇಬ್ಬರೂ ಚೌಕಟ್ಟಿನ ಹೊರಗಿರುವ ಮಾರಿಯಾಳ ಕಡೆ ತಿರುಗುತ್ತಾರೆ.

ಬ್ರೂನೋ : ಮಾಮಾ. ಬೈ.

ರಿಚಿ : (ಮೆಲುನಗುತ್ತ) ಬೈ.

ಮಾರಿಯಾ : (ಹೊರಗಿನಿಂದ) ಬೈ.

ರಿಚಿ ಹೊರಗಿನಿಂದ ಬಾಗಿಲು ಹಾಕಿಕೊಳ್ಳುತ್ತಾನೆ.

ಕ್ಷಯ_ವರ್ಧನ

ನಗರದ ಹೊರಭಾಗ. ಮುಂಜಾವಿನ ಮಬ್ಬು ಕತ್ತಲಲ್ಲಿ ಬೆಳಕಿನ ಕಿರಣಗಳು ಹಬ್ಬಿಕೊಳ್ಳುತ್ತಿವೆ. ಜನ ಕಿಕ್ಕಿರಿದು ತುಂಬಿಕೊಂಡಿರುವ ಒಂದು ಟ್ರ್ಯಾಮ್ ಬರುತ್ತಿದೆ.

ಚಿತ್ರದ ವಸ್ತು ಸಂಗೀತದ ಜೊತೆ ಹರ್ಷ ಉಲ್ಲಾಸದ ಸ್ವರಮೇಳ.

ಕಾರ್ಮಿಕರು ಧಾವಿಸುತ್ತಿರುವ ಅನೇಕ ಚಿತ್ರಿಕೆಗಳು, ದೂರ ಆಕಾಶದ ಹೊಳಪು ಹಿನ್ನೆಲೆಯಲ್ಲಿ ಮಬ್ಬುಗತ್ತಲೆಯಲ್ಲಿ ಚಲಿಸುವ ಕಪ್ಪು ಆಕೃತಿಗಳು. ಸೈಕಲ್‌ಗಳ ಗುಂಪು ಒಂದು ಸೈಕಲ್ ಮೇಲೆ ರಿಚಿ ಬ್ರೂನೋನನ್ನು ಬಾರ್ ಮೇಲೆ ಕೂರಿಸಿಕೊಂಡಿದ್ದಾನೆ. ಬರಿದಾಗಿರುವ ರಸ್ತೆಯ ದೂರ ಚಿತ್ರದಲ್ಲಿ ಕಪ್ಪು ಸೈಕಲ್ ಸವಾರರ ಆಕೃತಿಗಳು ಚಲಿಸುತ್ತಿವೆ. ಒಂದು ಚೌಕ. ಇನ್ನೂ ಜನ ಜಂಗುಳಿ ಸೇರಿಲ್ಲ. ರಿಚಿ ನಿಲ್ಲುತ್ತಾನೆ. ಒಂದು ಬಸ್ ಜನರ ಹಿಂಡನ್ನು ತುಂಬಿಕೊಂಡು ಬರುತ್ತದೆ. ಬ್ರೂನೋ ಇಳಿಯುತ್ತಾನೆ

ರಿಚಿ : ಸಾಯಂಕಾಲ ಏಳಕ್ಕೆ ಬರ್ತೀನೆ. ಇಲ್ಲೇ ನಿಂತಿರು ಆಯ್ತಾ ?

ರಿಚಿ ಚೌಕದಿಂದ ಸೈಕಲ್ ಹತ್ತಿ ಮರೆಯಾಗುತ್ತಾನೆ. ಕೆಮೆರಾಕ್ಕೆ ಬೆನ್ನು ಹಾಕಿ ನಿಂತ ಬ್ರೂನೋ ತಂದೆಗೆ ಕೈ ಮಾಡುತ್ತಿದ್ದಾನೆ.

ಬ್ರೂನೋ : ಬೈ_ಪಾಪ_ಬೈ_ ಪಾಪಾ.

ಕೆಮೆರಾ ಲಾಳ ತಿರುಗಿದಾಗ ಬ್ರೂನೋ ಬದಿಗೆ ಮೆಟ್ಟಿಲೇರುವುದು ಕಾಣುತ್ತದೆ. ಅಲ್ಲಿ ಒಬ್ಬ ಕಸ ಗುಡಿಸುತ್ತಿದ್ದಾನೆ. ಅದೊಂದು ಪೆಟ್ರೋಲ್ ಬಂಕ್.

ಬ್ರೂನೋ : ಮಾರ್ನಿಂಗ್

ಅವನು ಮಾತಾಡುವುದಿಲ್ಲ. ಬ್ರೂನೋ ಬದಿಗಿರುವ ಶೆಡ್‌ನೊಳಗೆ ಹೋಗಿ ಒಂದು ಡಬ್ಬ ಒಂದು ಲಾಳಿಕೆಯೊಡನೆ ಹೊರಬಂದು ಪೆಟ್ರೋಲ್ ಪಂಪ್‌ನ ಬದಿಗೆನಿಲ್ಲುತ್ತಾನೆ.

ದೃಶ್ಯ ತುಂಬಾಗಿ ರಿಚಿ ಕಾಣುತ್ತಿದ್ದಾನೆ. ಹೊಳಪಿನ ಹಿನ್ನೆಲೆಯಲ್ಲಿ ನೆರಳಿನ ರಸ್ತೆಯೊಂದರಲ್ಲಿ ಸೈಕಲ್ ಓಡುತ್ತಿದೆ. ಕೆಮೆರಾ ಜೊತೆಗೇ ಓಡುತ್ತ ಪಾರ್ಶ್ವದಿಂದ ಅವನನ್ನು ಗ್ರಹಿಸುತ್ತಿದೆ.

ಕ್ಷಯ–ವರ್ಧನ

ಪೋಸ್ಟರ್ ಕಛೇರಿಯಿಂದ ಒಂದು ಗುಂಪು ಜನ ಹೆಗಲ ಮೇಲೆ ಏಣಿಯಿಟ್ಟುಕೊಂಡು ಸೈಕಲ್ ಮೇಲೆ ಹೊರಡುತ್ತಾರೆ. ರಸ್ತೆಯಲ್ಲಿ ಹೋಗುತ್ತಿರುವಾಗ ಅಲ್ಲಲ್ಲಿ ಕಸಗುಡಿಸುವ ಹಾಗೂ ಮತ್ತಿತರ ಕಾರ್ಮಿಕರು ಕಾಣುತ್ತಿದ್ದಾರೆ.

ಹರ್ಷ ಸಂಗೀತ ಕ್ಷೀಣಿಸುತ್ತದೆ.

ಕ್ಷಯ–ವರ್ಧನ

ಸೂರ್ಯನ ಬೆಳಕು ಸ್ವಲ್ಪ ಪ್ರಖರವಾಗಿದೆ. ರಿಚಿ ಮತ್ತು ಅವನ ಸಹಕಾರ್ಮಿಕ ಒಂದು ಗೋಡೆಯೆದುರು ನಿಂತಿದ್ದಾರೆ. ಪೋಸ್ಟರುಗಳು ಗೋಡೆಯ ಮೇಲೆ ಕಾಣುತ್ತಿವೆ. ಈತನ ಸಹ ಕಾರ್ಮಿಕ ಒಂದು ಪೋಸ್ಟರ್ ಬಿಚ್ಚಿ ಗೋಡೆಯ ಮೇಲಿಡುತ್ತಾನೆ. ರಿಚಿ ಗೋಂದಿನ ಪಾತ್ರೆ ಹಿಡಿದಿದ್ದಾನೆ. ಹಿನ್ನೆಲೆಯಲ್ಲಿ ಎರಡು ಸೈಕಲ್‌ಗಳು ಗೋಡೆಗೆ ಅನಿಸಿಕೊಂಡು ನಿಂತಿವೆ. ಕೆಮೆರಾ ಲಾಳ ತಿರುಗಿ ಮುಂದೆ ಸರಿದಾಗ ಸಹಕಾರ್ಮಿಕ ಪೋಸ್ಟರ್ ಅಂಟಿಸುತ್ತ ಆ ಕೆಲಸದ ಬಗ್ಗೆ ವಿವರಣೆ ನೀಡುತ್ತಿರುವುದು ಕಾಣಿಸುತ್ತದೆ.

ಭಿಕ್ಷುಕ ಬಾಲಕರ ಅಕಾರ್ಡಿಯನ್ ಸಂಗೀತ

ಸಹಕಾರ್ಮಿಕ : ನೋಡು, ಮೊದ್ಲು ಸ್ವಲ್ಪ ಗೋಂದು ಗೋಡೆಗೆ ಹಚ್ಕೋತಿಯಾ. ಅದರ ಮೇಲೆ ಪೋಸ್ಟರ್ ಇಡ್ತಿಯಾ ಹಾಂ, ಹೀಗೆ ಸುಕ್ಕು ಉಳೀ ಬಾರ್ದು–ಹಾಗೆ ಒಂದ್ಸಾರಿ ಸರಿಯಾ ನೋಡಿಕೊಂಡು ಆಮೇಲೆ, ಮೇಲೆ ಒಂದು ಸಾರಿ ಗೊಂದು ಸವರ್ತೀಯಾ.

ಈ ಇಬ್ಬರು ಗೋಡೆಯ ಬಳಿ ಇರುವ ಮಧ್ಯ ದೂರ ಚಿತ್ರ – ಅವರ ಸಮೀಪ ಇಬ್ಬರು ಮಕ್ಕಳು ಅಕಾರ್ಡಿಯನ್ ಭಿಕ್ಷೆ ಬೇಡುತ್ತಿದ್ದಾರೆ. ಅಂಟಿಸುತ್ತಿರುವ ಪೋಸ್ಟರ್‌ನಲ್ಲಿ ಪ್ರಸಿದ್ಧ ಚಿತ್ರನಟಿ ರೀಟಾ ಹೇವರ್ತ್‌ಳ ಚಿತ್ರವಿದೆ.

ಸಹಕಾರ್ಮಿಕ : (ಮುಂದುವರೆಸುತ್ತ) ಹೂಂ ... ಹೀಗೆ.... ಒಣಗಿದ ಮೇಲೆ ನಿರಿಗೆ ಬೀಳಬಾರದು. (ಮಕ್ಕಳಿಗೆ) ಏಯ್ ಹೋಗಿ ಆಚೆ. (ರಿಚಿಗೆ) ನಿರಿಗೆ ಬಿದ್ದಿದ್ದು ಏನಾದ್ರೂ ನಮ್ಮ

ಇನ್ಸ್‌ಪೆಕ್ಟರ ಕಣ್ಣಿಗೆ ಬಿತ್ತೆಂದ್ರೆ ಮುಗೀತು, ಕೆಲಸ ಹೋದ ಹಾಗೇ.

ಒಬ್ಬ ವಯಸ್ಕ ರಸ್ತೆಯಲ್ಲಿ ಹಾದು ಹೋಗುತ್ತಾನೆ. ಕಪ್ಪು ಕೋಟು, ಹ್ಯಾಟು ಮುಂತಾದ ಅನುಕೂಲಸ್ಥನ ಅಲಂಕಾರಿಕ ವೇಷ ಭೂಷಣಗಳು. ರಸ್ತೆಯಲ್ಲಿ ಆತ ಮುಂದೆ ನಡೆದಂತೆ ಕೆಮೆರಾ ಲಾಳ ತಿರುಗುತ್ತದೆ. ಭಿಕ್ಷುಕ ಹುಡುಗರ ಪೈಕಿ ಒಬ್ಬ ಅವನನ್ನು ಭಿಕ್ಷೆ ಕೇಳುತ್ತಾ ಹಿಂಬಾಲಿಸುತ್ತಾನೆ. ಸ್ವಲ್ಪ ದೂರ ಹೋಗಿ ಬರಿಗೈಯಲ್ಲಿ ಹಿಂದಿರುಗುತ್ತಾನೆ.

ಸಹಕಾರ್ಮಿಕ : ಈ ಕೆಲಸಕ್ಕೆ ಬುದ್ಧಿ ಚುರುಕಾಗಿರಬೇಕು. ತಿಳೀತಾ ?

ಇಬ್ಬರೂ ಏಣಿಗಳನ್ನು ತೆಗೆದುಕೊಂಡು ಸೈಕಲ್ ಇರುವಲ್ಲಿಗೆ ಹೋಗುತ್ತಾರೆ.

ಸಹಕಾರ್ಮಿಕ : ಸರಿ, ಆಮೇಲೆ ನೋಡೋಣ.

ರಿಚಿ : ಥ್ಯಾಂಕ್ಸ್, ಬೈ

ಕೆಮೆರಾ ಲಾಳ ತಿರುಗಿ ರಿಚಿ ಸೈಕಲ್ ಹತ್ತಿ ಹೋಗುತ್ತಿರುವುದನ್ನು ತೋರಿಸುತ್ತದೆ.

ಸಂಗೀತ ಕೊನೆಗೊಳ್ಳುತ್ತದೆ.

ಕ್ಷಯ–ವರ್ಧನ

ನಗರದ ಮಧ್ಯದಲ್ಲಿ ಒಂದು ರಸ್ತೆ. ರೀಟಾಹೇವರ್ತ್‌ಳ ಚಿತ್ರವಿರುವ ಪೋಸ್ಟರಿನ ಸಮೀಪ ಚಿತ್ರ. ಅಂಟಿಸಿದ್ದು ಸರಿಯಾಗದೆ ಅಲ್ಲಲ್ಲಿ ಗುಳ್ಳೆಗಳು ಉಂಟಾಗಿವೆ. ರಿಚಿಯ ಕೈಗಳು ಗುಳ್ಳೆಗಳನ್ನು ಸರಿಪಡಿಸಲು ಹೆಣಗುತ್ತಿವೆ.

ಭಾರಿ ವಾಹನಗಳ ಕರ್ಕಶ ಸದ್ದು.

ಬೇರೆ ಬೇರೆ ಉದ್ದಗಲಗಳ ಬೇರೆ ಬೇರೆ ಮಾದರಿಯ ಅನೇಕ ಪೋಸ್ಟರ್‌ಗಳನ್ನು ಒಂದರ ಮೇಲೊಂದು ಅಂಟಿಸಲಾಗಿದೆ. ಗೋಡೆಯ ಮೇಲೆ ಏಣಿಯಿಟ್ಟು ರಿಚಿ ಪೋಸ್ಟರ್ ಅಂಟಿಸುತ್ತಿದ್ದಾನೆ. ಏಣಿಯ ಕೆಳಗೆ ರಸ್ತೆಯ ಬದಿಗೆ ಗೋಡೆಗೆ ಆನಿಸಿ ಸೈಕಲ್ ನಿಂತಿದೆ. ಸ್ವಲ್ಪ ದೂರದಲ್ಲಿ ಕೆಲವು ವ್ಯಕ್ತಿಗಳು ಕಾಣಿಸುತ್ತಾರೆ. ಸೈಕಲ್ ಬುಡದಲ್ಲಿ ಸ್ವಲ್ಪ ನಿಂತವರಂತೆ ಮಾಡಿ ಮತ್ತೆ ಹಾದಿ ಹಿಡಿದು ಹೋಗುತ್ತಾರೆ. ಅವರಲ್ಲೊಬ್ಬ ಸೈಕಲ್ ಸಮೀಪ ನಿಲ್ಲುತ್ತಾನೆ. ಕೆಮೆರಾ ಲಾಳ ತಿರುಗಿದಾಗ ನಿಲ್ಲಿಸಿದ ಅನೇಕ ಕಾರುಗಳ ಸಂದಲ್ಲಿ ಅಡಗಿರುವ ಯುವಕನೊಬ್ಬ ಕಾಣುತ್ತಾನೆ. ಆತ ರಿಚಿಯನ್ನು ನೋಡುವಂತಿದೆ. ರಿಚಿ ಇನ್ನೂ ಏಣಿಯ ಮೇಲೆ ಇದ್ದಾನೆ. ಜರ್ಮನ್ ಟೋಪಿ ಮತ್ತು ಜಾಕೆಟ್ ಧರಿಸಿದ ಯುವಕ ಸುತ್ತಲೂ ನೋಡಿ ಸೈಕಲ್ ಸಮೀಪ ನಿಂತ ತನ್ನ ಸ್ನೇಹಿತನ ಹತ್ತಿರ ಹೋಗುತ್ತಾನೆ. ಅವರು ಪರಸ್ಪರ ಗಮನಿಸಿದಂತಿದ್ದಾರೆ.

ಜರ್ಮನ್ ಟೋಪಿಯ ಯುವಕ ಕಡೆಗಣ್ಣಲ್ಲಿ ರಿಚಿಯನ್ನು ಗಮನಿಸುತ್ತಿದ್ದಾನೆ. ರಿಚಿ ಇನ್ನೂ ಕೆಲಸದಲ್ಲಿ ತೊಡಗಿದ್ದಾನೆ. ಮಧ್ಯ ಚಿತ್ರದಲ್ಲಿ ಬೈಸಿಕಲ್ ಮತ್ತು ಯುವಕ ಕಾಣುತ್ತಿದ್ದಾರೆ. ಯುವಕ ಒಮ್ಮೆಲೇ ಹಾರಿ ಬೈಸಿಕಲ್ ಏರುತ್ತಾನೆ. ರಸ್ತೆಯುದ್ದಕ್ಕೆ ಧಾವಿಸುವಾಗ ಗೋಂದಿನ ಪಾತ್ರೆಗೆ ಡಿಕ್ಕಿ ಹೊಡೆದು ಗೋಂದು ಚೆಲ್ಲುತ್ತದೆ. ಸಮೀಪ ಮಧ್ಯ ಚಿತ್ರದಲ್ಲಿ ಪೋಸ್ಟರ್ ಅಂಟಿಸುತ್ತಿರುವ ರಿಚಿ ಒಮ್ಮೆಲೇ ಇತ್ತ ಗಮನಿಸುತ್ತಾನೆ.

ರಿಚಿ : ಕಳ್ಳ....ಕಳ್ಳ ಹಿಡೀರಿ ಕಳ್ಳ....ಹಿಡೀರಿ.

ರಿಚಿ ಕೆಳಕ್ಕೇ ನೆಗೆದು ಓಡತೊಡಗುತ್ತಾನೆ. ಆ ಯುವಕ ಸೈಕಲ್ಲನ್ನು ವಕ್ರವಕ್ರವಾಗಿ ಹೊಡೆಯುತ್ತ ಧಾವಿಸುತ್ತಾನೆ.

ರಿಚಿ : ಕಳ್ಳ ಕಳ್ಳ

ರಿಚಿ ಓಡುತ್ತಿರುವಾಗ ಆ ಯುವಕನ ಜೊತೆಗಾರ ಬೇಕೆಂದೇ ರಿಚಿಗೆ ಢಿಕ್ಕಿ ಹೊಡೆಯುತ್ತಾನೆ.

ಜೊತೆಗಾರ : ಏನು ? ಏನಾಯಿತು ?

ರಿಚಿ ಅವನನ್ನು ದೂಡಿ ಮುಂದೆ ಸಾಗುತ್ತಾನೆ. ದೂರ ಚಿತ್ರದಲ್ಲಿ ರಸ್ತೆಯ ಮೇಲೆ ಕಳ್ಳ ಮಿಂಚಿನಂತೆ ಓಡುತ್ತಿರುವುದು ಕಾಣುತ್ತದೆ. ರಿಚಿ ಕೂಗುತ್ತ ಅವನನ್ನು ಹಿಂಬಾಲಿಸುತ್ತಿದ್ದಾನೆ. ಕೆಮೆರಾ ಲಾಳ ತಿರುಗಿದಾಗ ಒಂದು ದೊಡ್ಡ ಚೌಕ ಕಾಣುತ್ತದೆ. ಹಾದಿಹೋಕರು ಕೊಂಚ ಮುಜುಗರದಿಂದ ಈ ಬೆನ್ನಟ್ಟುವುದನ್ನು ನೋಡುತಾರೆಯೇ ಹೊರತು ಹೆಚ್ಚು ಗಮನ ಕೊಡುವುದಿಲ್ಲ. ಕೆಮೆರಾ ಮೇಲು ಸ್ಥಾನವೊಂದರಿಂದ ದೃಶ್ಯ ಗ್ರಹಿಸುತ್ತದೆ. ವಾಹನಗಳ ಮಧ್ಯೆ ಕಳ್ಳ ಅದೃಶ್ಯನಾಗುತ್ತಿದ್ದಾನೆ. ರಿಚಿ ಆ ಕಳ್ಳ ಹೋದ ದಿಕ್ಕಲ್ಲೇ ಹೋದ ಕಾರನ್ನು ಅನುಸರಿಸಿ ಓಡುತ್ತಾನೆ.

ರಿಚಿ : (ಡ್ರೈವರಿಗೆ) ನಿಲ್ಸು ಅವನನ್ನ.

ಡ್ರೈವರ್ ಕಾರ್ ಚಲಿಸುತ್ತಿರುವಂತೆಯೇ ಹತ್ತಲು ಸಂಜ್ಞೆ ಮಾಡುತ್ತಾನೆ.

ಡ್ರೈವರ್ : ಬಾ, ಬೇಗ. ಹತ್ತು.

ರಿಚಿ : (ಹತ್ತಿ, ಕೈತೋರಿಸುತ್ತ) ಹೂಂ. ಈ ಹಾದೀಲೇ ಹೋದ. ಹಿಡಿ.

ಕಾರ್ ಸುರಂಗದ ಕಡೆ ಬರುತ್ತಿರುವಂತೆ ಒಬ್ಬ ಹೊಸಬ ಇನ್ನೊಂದು ಬದಿಯಿಂದ ಫುಟ್ ಬೋರ್ಡ್ ಹತ್ತಿಕೊಳ್ಳುತ್ತಾನೆ.

ಹೊಸಬ : ಸುರಂಗ, ಸುರಂಗದ ಕಡೆಹೋಗು.
ನಾನು ನೋಡಿದೆ ಅವನ್ನ.

ಕಾರಿನ ಮುಂಭಾಗದಿಂದ ಕೆಮೆರಾ ಸುರಂಗವನ್ನು ಮತ್ತು ಟೋಪಿಧಾರಿ ಯುವಕ ಸವಾರನೊಬ್ಬನನ್ನು ಕಾಣಿಸುತ್ತದೆ. ರಿಚಿ ಕಾರಿನ ಫುಟ್‌ಬೋರ್ಡ್‌ನ ಮೇಲೆ ನಿಂತ ಮಧ್ಯಚಿತ್ರಿಕೆ.

ರಿಚಿ : ಬೇಗ. ನಾವು ಅವನನ್ನು ಹಿಡೀಬೇಕು.

ಕೆಮೆರಾ ಎದುರು ಭಾಗಕ್ಕಿರಲು ಕಾರ್ ಸುರಂಗ ಪ್ರವೇಶಿಸುತ್ತಿದೆ. ಸುರಂಗದ ಒಳ ಭಾಗದಿಂದ ಬರುತ್ತಿರುವ ಕಾರನ್ನು ಕೆಮೆರಾ ನೋಡುತ್ತಿರುವ ದೀರ್ಘ ಚಿತ್ರಿಕೆ. ಕಾರ್ ಕೆಮೆರಾದ ಕಡೆ ಮುಂದುವರೆದು ಬಂದು ಸೈಕಲ್ ಸವಾರನಿಗೆ ಅಡ್ಡಲಾಗಿ ತಟ್ಟನೆ ನಿಲ್ಲುತ್ತದೆ. ಸೈಕಲ್‌ನವ ನಿಲ್ಲುತ್ತಾನೆ. ಅವನಿಗೆ ಕೋಪ ಬಂದಿದೆ. ಮಧ್ಯ ಚಿತ್ರಿಕೆಯಲ್ಲಿ ಕಾಣುವ ಅವನು ಕಳ್ಳನಲ್ಲ ಎಂಬುದು ಸ್ಪಷ್ಟವಾಗುತ್ತದೆ. ಮಧ್ಯ ದೂರ ಚಿತ್ರಿಕೆಯಲ್ಲಿ ಹೊಸಬ ಸವಾರನ ಕಡೆ ಕಾರಿನಿಂದ ಜಿಗಿಯುತ್ತಾನೆ.

ಸೈಕಲ್‌ನವ : ಏಯ್. ಏನ್ ಕತೆ ನಿಂದು ?

ಹೊಸಬ ಸೈಕಲ್‌ನವನನ್ನು ಬಿಟ್ಟು ಕೊಡುತ್ತಾನೆ.

ಸೈಕಲ್‌ನವ : ನಿಂಗೇನು ಹುಚ್ಚಾ ? ಏನಾಗಿದೆ ನಿಂಗೆ ?

ಆದ ತಪ್ಪಿನಿಂದ ಬೇಸರಗೊಂಡ ರಿಚಿ ಕಾರ್‌ನಿಂದ ಇಳಿಯುತ್ತಾನೆ. ಆತ ದಿಕ್ಕು ತೋಚದೆ ಮೂಕನಾಗಿದ್ದಾನೆ. ಸೈಕಲ್‌ನವ ಮತ್ತು ಹೊಸಬನ ಮಧ್ಯ ಚಿತ್ರ.

ಸೈಕಲ್‌ನವ : ಹುಷಾರಾಗಿರು. ಇನ್ನು ಎಲ್ಲಾದ್ರೂ ಹೀಗೇ ಮಾಡೀಯಾ.

ಸವಾರ ಸೈಕಲ್ ಹತ್ತಿ ಹೋಗುತ್ತಾನೆ. ಹೊಸಬ ಸುಳ್ಳು ಬೆರಗನ್ನು ನಟಿಸುತ್ತ ಕಾರಿಗೆ ವಾಪಸಾಗುವುದನ್ನು ಕೆಮೆರಾ ಲಾಳ ತಿರುಗಿ ತೋರಿಸುತ್ತದೆ.

ಹೊಸಬ : (ಡ್ರೈವರ್‌ಗೆ) ಏನೋ ಗೊತ್ತಾಗೋಲಪ್ಪ. ನಂದೇ ತಪ್ಪಾಯ್ತಾ ? ಆದ್ರೂ ಪ್ರಮಾಣ ಮಾಡಿ ಹೇಳ್ತೀನಿ. ಅವನು ಹೊಕ್ಕಿದ್ದು ಕಂಡೆ ನಾನು. ಅಲ್ವಾ. ಡ್ರೈವರ್........ ನಾವೇ ಕಂಡೆವಲ್ಲಾ.

ಹೊಸಬ ಭುಜಕುಲುಕಿ ಹೊರಟು ಹೋಗುತ್ತಾನೆ. ರಿಚಿ ಹತಾಶನಾಗಿ ಸುರಂಗದಿಂದ ಹೊರ ಬರುತ್ತಿರುವ ದೂರ ಚಿತ್ರ.

ವಸ್ತು ಸಂಗೀತ ಪ್ರಾರಂಭವಾಗುತ್ತದೆ.

ತುಂಬ ಸೋತವನಂತೆ ರಿಚಿ ಕೆಮೆರಾದ ಕಡೆ ಬರುತ್ತಿದ್ದಾನೆ. ಸುತ್ತ ಶೂನ್ಯದೃಷ್ಟಿಯಿಂದ ನೋಡುತ್ತಿದ್ದಾನೆ. ಹಣೆಯಲ್ಲಿ ಬೆವರೊರೆಸಿ ಕೊಳ್ಳುತ್ತಾನೆ. ನಿದ್ದೆಯಲ್ಲೋ ಎಂಬಂತೆ ನಡೆಯುತ್ತಿರುವ ರಿಚಿಯನ್ನು ಕೆಮೆರಾ ಅನುಸರಿಸುತ್ತದೆ.

ಕಿಕ್ಕಿರಿದ ರಸ್ತೆಗಳ ದೂರ ಚಿತ್ರಗಳು ಮತ್ತು ರಿಚಿ ನಿಧಾನವಾಗಿ ತನ್ನ ಏಣಿಯ ಕಡೆ ಸಾಗುತ್ತಿರುವ ಚಿತ್ರ. ಈ ಎರಡನ್ನು ಒಂದಾದ ಮೇಲೊಂದು ಪುನಃ ಪುನಃ ಕಾಣಿಸಲಾಗುತ್ತದೆ. ರಿಚಿ ಏಣಿಯ ಹತ್ತಿರ ಬಂದು ಅದಕ್ಕೆ ಒರಗುತ್ತಾನೆ. ಮತ್ತೆ ನಿಂತು ಗೋಂದಿನ ಪಾತ್ರೆಯನ್ನು ರಪ್ಪನೆ ನೆಲಕ್ಕೆ ಅಪ್ಪಳಿಸುತ್ತಾನೆ. ಏಣಿಯನ್ನು ಎಸೆಯಲು

ಯೋಚಿಸಿದವ ಹಾಗೆ ಮಾಡದೆ ಬ್ರಶ್ ತೆಗೆದು ಅದನ್ನು ನಿರುದ್ದಿಶ್ಯವಾಗಿ ಪೋಸ್ಟರಿನ ಮೇಲೆ ರಾಚುತ್ತಾನೆ. ಬ್ರಶ್ ಒಗೆಯುತ್ತಾನೆ. ಏಣಿಯ ಮೇಲೆ ಕೂತು ಯೋಚಿಸ ತೊಡಗುತ್ತಾನೆ. ಕೆಮೆರಾ ನಿಧಾನವಾಗಿ ಇವನನ್ನು ಕೇಂದ್ರೀಕರಿಸಿ ಸಮೀಪಿಸುತ್ತದೆ.

ವಸ್ತುಸಂಗೀತ ಮುಗಿಯುತ್ತದೆ.

ಕ್ಷಯ–ವರ್ಧನ

ಪೊಲೀಸ್ ಸ್ಟೇಷನ್. ಪೋಸ್ಟರ್‌ಗಳನ್ನು ಕಂಕುಳಲ್ಲಿಟ್ಟುಕೊಂಡು ನಿಂತ ರಿಚಿಯ ಮಧ್ಯ ಸಮೀಪ ಚಿತ್ರ. ಮುನ್ನೆಲೆಗೆ ಪೋಲೀಸ್ ಅಧಿಕಾರಿಯೊಬ್ಬನ ಸಮೀಪ ಚಿತ್ರ. ಆತನ ಹಿಂಭಾಗಕ್ಕೆ ಕಪಾಟು, ಡೆಸ್ಕು, ತಿರುಗಾಡುತ್ತಿರುವ ಜನ ಇತ್ಯಾದಿ.

ರಿಚಿ : ಹೌದು. ಅಲ್ಲಿ ಜನ ಇದ್ದರು. ಆದರೆ.... ಆದರೆ ಅವರೆಲ್ಲ ಅವರವರ ಕೆಲಸದಲ್ಲಿದ್ರು. ನಾನು ಕಳ್ಳನ ಹಿಂದೆ ಓಡಿದೆ ಬೆನ್ನಟ್ಟಿದೆ.

ಒಬ್ಬ ಮನುಷ್ಯ : (ಹೊರಗಿಂದ) ಹೇ. ಫೆಲೋನಿ.

ಅಧಿಕಾರಿ (ಫೆಲೋನಿ) ರಿಚಿಯ ಹೇಳಿಕೆ ತೆಗೆದು ಕೊಳ್ಳುತ್ತಿದ್ದವ ಮೇಲೆದ್ದು ಕಿಟಕಿಯ ಕಡೆ ನೋಡುತ್ತಾನೆ. ಕೆಮೆರಾ ಅನುಸರಿಸುತ್ತದೆ.

ಫೆಲೋನಿ : ಏನು ?

ಮೆಲು ಕೋನದಿಂದ ಪೋಲೀಸ್ ಕಛೇರಿಯ ಹೊರ ಅಂಗಳದ ದೃಶ್ಯ. ಹೊರಡಲು ತಯಾರಾಗಿ ನಿಂತ ಜೀಪುಗಳು. ಅವುಗಳ ಮೇಲ್ವಿಚಾರಕ ಅಧಿಕಾರಿ ತಲೆಯೆತ್ತಿ ಮಾತಾಡುತ್ತಿದ್ದಾನೆ.

ಆತ : ಮೀಟಿಂಗ್‌ಗೆ ನೀನೇ ಹೋಗಬೇಕು.

ಫೆಲೋನಿ : ಬೇರೆ ಯಾರಿಗೋ ಹೇಳಿತ್ತಲ್ಲ ?

ಆತ : ಅದೆಲ್ಲ ಹಿಂದು ಮುಂದಾಯ್ತು. ಅವರೆಲ್ಲ ಈಗ ಬೇರೆ ಕಡೆ ಹೋಗ್ತಿದಾರೆ. ನೀನು ಮತ್ತು ಕ್ವಾಡ್ರೋನ್ ಅಲ್ಲಿ ಹೋಗಬೇಕು.

ಆತ ಜೀಪ್ ಹತ್ತುತ್ತಾನೆ. ರೊಯ್ಯನೆ ಜೀಪ್‌ಗಳು ಚಲಿಸುತ್ತವೆ. ಕೆಮೆರಾ ಲಾಳ ಫೆಲೋನಿ ತನ್ನ ಡೆಸ್ಕಿಗೆ ಹಿಂದಿರುಗುತ್ತಾನೆ. ರಿಚಿ ಅಲ್ಲೇ ಕೂತಿದ್ದಾನೆ. ಫೆಲೋನಿ ಅವನಿಗೆ ಒಂದು ಕಾಗದ ಕೊಡುತ್ತಿರುವಂತೆ ರಿಚಿ ತಲೆಯೆತ್ತಿ ನೋಡುತ್ತಾನೆ.

ಫೆಲೋನಿ : ಅದರ ಮೇಲೆ ರುಜು ಮಾಡು.

ರಿಚಿ ರುಜುಮಾಡುತ್ತಿದ್ದಂತೆ ಫೆಲೋನಿ ಹಿನ್ನೆಲೆಯಲ್ಲಿರುವ ಒಬ್ಬನನ್ನು ಕೂಗುತ್ತಾನೆ.

ಫೆಲೋನಿ : ಕ್ವಾಡ್ರೋನ್.

ಕ್ಯಾಡ್ರೋನ್ : ಇದೀನಿ, ಸರ್.
ಫೆಲೋನಿ : ನಾವು ಹೊರಡಬೇಕು ಈಗ.
ಕ್ಯಾಡ್ರೋನ್ : (ಹೊರಗಿಂದ) ಹಾಗಾದ್ರೆ ಹೊರಟೇ ಬಿಡೋಣ್ವಾ ಸಾರ್.

ರಿಚಿ ತಾನು ರುಜು ಮಾಡಿದ ಹೇಳಿಕೆಯನ್ನು ಹಿಡಿದು ನಿಂತಿದ್ದಾನೆ.

ರಿಚಿ : ಸಾರ್, ಏನಾದ್ರೂ ಮಾಡಬಹುದಂತೀರ ?
ಫೆಲೋನಿ : ನಿಂಗೆ ಏನಾದ್ರೂ ಪುರುಸೊತ್ತಿದ್ರೆ ನೀನೇ ಸ್ವಲ್ಪ ಪ್ರಯತ್ನ ಮಾಡಬಹುದು.

ಫೆಲೋನಿ ತನ್ನ ಕೋಟು ತೆಗೆದು ಕೊಳ್ಳುತ್ತಾನೆ. ರಿಚಿಯ ಮುಖದಲ್ಲಿ ಬೇಸರ ಆತಂಕ.

ರಿಚಿ : ಅಂದ್ರೆ, ಈ ರೋಮ್‌ನಗರ ಪೂರ್ತಿ ನಾನೇ ತಿರುಗಾಡಿ ಹುಡುಕ ಬೇಕಂತೀರಾ ?
ಫೆಲೋನಿ : ಮತ್ತೆ ನಾನು ಹುಡುಕಬೇಕಂತೀಯಾ ? ಅದು ಹ್ಯಾಗಿದೆ ಅಂತೂ ಗೊತ್ತಿಲ್ಲ ನನಗೆ.
ರಿಚಿ : ನಾನು ನಂಬರು. ಚಹರೆ ಪಟ್ಟಿ ಕೊಟ್ಟಿದ್ದೇನಲ್ಲ.
ಫೆಲೋನಿ : (ಹೊರಗಿಂದ) ನೋಡು, ನಿನ್ನ ಸೈಕಲ್ ಹುಡುಕೋಕೆ ನಮ್ಮಲ್ಲಿರೋ ಇಡೀ ಸಂಚಾರಿ ಬ್ರಿಗೇಡ್ ಬೇಕಾದೀತು.
ರಿಚಿ : ಮತ್ತೆ ನನ್ನ ಹೇಳಿಕೆ ತಗೋಂಡಿದ್ದು ಯಾಕೆ ?

ಫೆಲೋನಿ ಈಗ ಕೋಟು ಮತ್ತು ಹ್ಯಾಟ್ ಧರಿಸಿ ನಿಂತಿದ್ದಾನೆ. ಇಬ್ಬರೂ ಮಧ್ಯ ಸಮೀಪ ಚಿತ್ರದಲ್ಲಿ ಕಾಣುತ್ತಿದ್ದಾರೆ.

ಫೆಲೋನಿ : ಕಾರಣ ಇದೆ. ನಾಳೆ ಯಾವುದೋ ರಸ್ತೇಲೋ ಅಂಗಡೀಲೋ ಸೈಕಲ್ ಸಿಗ್ತು ಅನ್ನು, ಆಗ ಪೋಲೀಸ್ನೋರನ್ನ ಕರಿಸ್ಬಹುದು. ಈಗ ಚಹರೆ ಪಟ್ಟಿ ಕೊಟ್ಟಿದೀಯು. ಆಗ ಅದು ನಿಂದೂ ಅಂತಲೂ ಸಾಧಿಸಬಹುದು.

ಹಿನ್ನೆಲೆಯಲ್ಲಿ ಒಬ್ಬ ಒಂದು ನೋಟ್ ಬುಕ್ ಹಿಡಿದ ಪತ್ರಿಕಾ ಪ್ರತಿನಿಧಿ ಮುಂದೆ ಬರುತ್ತಾನೆ.

ಪ. ಪ್ರ. : ಮತ್ತೇನಾದ್ರೂ ಹೊಸದು ?
ಫೆಲೋನಿ : ಏನಿಲ್ಲ. ಒಂದು ಸೈಕಲಂತೆ.
ಪ. ಪ್ರ. : (ಹೊರಡುತ್ತ) ಥ್ಯಾಂಕ್ಸ್. ರಾತ್ರಿ ನೋಡ್ತೀನಿ.
ರಿಚಿ : ಹಾಗಾದ್ರೆ ಅದನ್ನ ನಾನೇ ಹುಡುಕ್ಕೋಬೇಕಾ ?

ಫೆಲೋನಿ : (ಸಿಟ್ಟಿನಿಂದ) ಹೇಳಿದ್ನಲ್ಲ. ಎಷ್ಟ್ಸಾರ್ತಿ ಹೇಳಬೇಕು ಕಂಪ್ಲೇಂಟ್ ಕೊಟ್ಟಿದೀಯ. ಮುಗೀತು. ಹೊರಡು ಇನ್ನು. ಗುಡ್ ಬೈ.

ರಿಚಿ : ಗುಡ್ ಬೈ.

ಅಧಿಕಾರಿ ಚೌಕದಿಂದ ಹೊರ ಹೋಗುತ್ತಾನೆ. ರಿಚಿ ದಿಕ್ಕು ತೋಚದವನಾಗಿ ತಿರುಗುತ್ತಾನೆ. ಕೆಮೆರಾ ಲಾಳ. ರಿಚಿ ಹೊರ ಬಾಗಿಲ ಕಡೆ ಹೋಗುತ್ತಾನೆ.

ಕ್ಷಯ–ವರ್ಧನ

ಈಗ ಸಂಜೆಯಾಗಿದೆ. ನಗರದ ಮಾರ್ಕೆಟ್ ಚೌಕದಲ್ಲಿ ನಿಂತ ಒಂದು ಬಸ್ ಕ್ಯೂ. ಅದರುದ್ದ ಕ್ಯೂ ಕೆಮೆರಾ ಚಲಿಸುತ್ತಿದೆ. ಅಸಂಖ್ಯ ಜನ, ಗಲಾಟೆ. ಒಂದಿಷ್ಟು ಜನ ಬಸ್ ಹತ್ತುತ್ತಾರೆ, ಬಾಗಿಲು ಹಾಕಿಕೊಂಡು ಬಸ್ ಹೋಗುತ್ತದೆ. ಉಳಿದ ಜನ ಒಬ್ಬರಿಗೊಬ್ಬರು ತಳ್ಳಿಕೊಳ್ಳುತ್ತ ಗೊಣಗಿಕೊಳ್ಳುತ್ತಿದ್ದಾರೆ.

ವಸ್ತು ಸಂಗೀತ.

ಧ್ವನಿಗಳು : ಎಲ್ಲರ ಹಾಗೆ ಹಿಂದೆ ಹೋಗಿ ನಿಂತ್ಕೊ....
ಏಯ್ ತಳ್ಬೇಡ....ಮುಂಚೆ ಬಂದಿದ್ದು ನಾನು....
ಯಾವಾಗ್ಲೂ ಇದೇ ಗೋಳು....

ರಿಚಿ ತನ್ನ ಅಧಿಕೃತ ಟೋಪಿ ತೊಟ್ಟು ಕ್ಯೂ ಸೇರುತ್ತಾನೆ. ಅವನ ಪಕ್ಕಕ್ಕಿರುವ ಹೆಂಗಸು ತಳ್ಳಿಕೊಂಡು ಮುಂದೆ ಹೊಗುತ್ತಿರುವ ಇವನನ್ನು ಕೆಕ್ಕರಿಸಿ ನೊಡುತ್ತಾಳೆ. ಕ್ಯೂ ನುಗ್ಗಾಟದಲ್ಲಿ ರಿಚಿ ಬಸ್ ಹತ್ತುತ್ತಾನೆ. ಕೊನೆಯವನಾಗಿ ಬಾಗಿಲು ಹಾಕಿಕೊಳ್ಳುತ್ತಿದ್ದಂತೆ ಹೊರಗಿನ ಜನ ಕೂಗುತ್ತಿದ್ದಾರೆ ಅತೃಪ್ತಿಯಿಂದ ಗಲಾಟೆ ಮಾಡುತ್ತಿದ್ದಾರೆ.

ಕ್ಷಯ–ವರ್ಧನ

ಬ್ರೂನೋ ಕೆಲಸ ಮಾಡುತ್ತಿರುವ ಪೆಟ್ರೋಲ್ ಬಂಕ್ ಚೌಕದ ಚಿತ್ರ.

ಸಂಗೀತದಲ್ಲಿ ಕ್ರಮೇಣ ದುಃಖದ ತಾನಗಳು ಹೊರಡತೊಡಗುತ್ತವೆ.

ಈಗ ರಾತ್ರಿಯಾಗಿದೆ. ಕೆಮೆರಾಲಾಳ. ಪೆಟ್ರೋಲ್ ಪಂಪ್ ಬದಿಗೆ ಬ್ರೂನೋ ಒಬ್ಬಂಟಿಯಾಗಿ ಕಾಯುತ್ತ ನಿಂತಿದಾನೆ.

ರಿಚಿ : (ಹೊರಗಿನಿಂದ) ಹೇ ಬ್ರೂನೋ.

ಬ್ರೂನೋ ತಟ್ಟನೆ ಚಕಿತಗೊಂಡು ತಿರುಗುತ್ತಾನೆ. ರಿಚಿ ಚೌಕದೊಳಗೆ ಪ್ರವೇಶಿಸು

ತ್ತಾನೆ. ಸಮೀಪ ಮಧ್ಯ ಚಿತ್ರದಲ್ಲಿ ಅವರಿಬ್ಬರು ಕಾಣುತ್ತಾರೆ.

ಬ್ರೂನೋ : ಪಪ್ಪಾ, ಏಳುವರೆ ಗಂಟೆ ಈಗ.

ರಿಚಿ : ನಾನು ಬಸ್ಸಿಗೆ ಬಂದೆ–ಹೋಗೋಣ ನಡಿ.

ಕೆಮೆರಾದ ಕಡೆ ನಡೆಯುತ್ತಾರೆ. ಕೆಮೆರಾ ಹಿಂದೆ ಸರಿಯುತ್ತಿದೆ.

ಬ್ರೂನೋ : (ಕೊಂಚ ಅಳುಕಿನಿಂದ) ಸೈಕಲ್ ಏನಾಯಿತು ?

ನಿರ್ಭಾವ ದೃಷ್ಟಿಯಿಂದ ರಿಚಿ ಮಗನನ್ನು ನೋಡುತ್ತಾನೆ.

ನಗರದ ಹೊರ ವಲಯದ ಇನ್ನೊಂದು ಚೌಕದ ಚಿತ್ರ. ತಂದೆ ಮಗ ಕೆಮೆರಾದಿಂದ ದೂರವಾಗುತ್ತ ನಡೆಯುತ್ತಿದ್ದಾರೆ. ಅವರ ಹಿಂದೆ ಒಂದು ಬಸ್ ಹಾದು ಹೋಗುತ್ತದೆ. ಸೇತುವೆಯ ಮೇಲೆ ನಡೆಯುತ್ತಿರುವ ಕೆಲಸಗಾರರ ಒಂದು ಗುಂಪು. ರಿಚಿ, ಬ್ರೂನೋ ಜತೆಯಲ್ಲಿದ್ದಾರೆ. ಕೊಂಚ ಮೇಲು ಕೋನದಿಂದ ಕಾಣುವ ದೂರ ಚಿತ್ರ. ನಂತರ ಕೆಮೆರಾ ಮಧ್ಯ ಸಮೀಪ ಚಿತ್ರಿಕೆಯಲ್ಲಿ ಅವರನ್ನು ಕಾಣಿಸುತ್ತದೆ. ಅವರು ಮಾತಿಲ್ಲದೆ ಇನ್ನೂ ಬಿಗುವಿನಲ್ಲೇ ನಡೆಯುತ್ತಿದ್ದಾರೆ. ಕೆಮೆರಾ ಹಿಂದಕ್ಕೆ ಚಲಿಸುತ್ತದೆ.

ಬ್ರೂನೊ : (ಕುತೂಹಲದಿಂದ) ಮುರಿದು ಹೋಯ್ತಾ ?

ರಿಚಿ : (ಅಸಹನೆಯಿಂದ) ಹುಂ. ಮುರಿದು ಹೋಯ್ತು.

ಮೌನದಲ್ಲಿ ಮುಂದುವರೆಯುತ್ತಾರೆ. ರಿಚಿ ಬ್ರೂನೋನ ಸ್ಕಾರ್ಫ್ ಸರಿಪಡಿಸುತ್ತಾನೆ.

ಕ್ಷಯ–ವರ್ಧನ

ರಿಚಿ ಮತ್ತು ಬ್ರೂನೋ ಮೆಟ್ಟಿಲು ಹತ್ತಿ ತಮ್ಮ ರೂಮಿನ ಬಾಗಿಲೆದುರು ನಿಲ್ಲುತ್ತಾರೆ. ರಿಚಿ ಸದ್ದಿಲ್ಲದೆ ಬಾಗಿಲು ತೆಗೆದು ಬ್ರೂನೋನನ್ನು ಒಳಗೆ ಕಳಿಸುತ್ತಾನೆ. ಮೆಟ್ಟಲಿನಿಂದ ಸ್ವಲ್ಪ ಮೇಲೆ ಮುಖ ಮಾಡಿರುವ ಮಧ್ಯ ಚಿತ್ರಿಕೆ.

ರಿಚಿ : ಒಳಗೆ ಹೋಗು.... ನಾನು ಆಮೇಲೆ ಬರ್ತೇನೆ.... ಹೋಗು....

ಬ್ರೂನೋ ಒಳಗೆ ಹೋಗುತ್ತಿದ್ದಂತೆ ರಿಚಿ ಬಾಗಿಲು ಮುಚ್ಚುತ್ತಾನೆ. ಅನಂತರ ನಿಧಾನವಾಗಿ ಮೆಟ್ಟಳಿದು ಕೆಮೆರಾಕಡೆ ಬರುತ್ತಾನೆ.

ವಸ್ತು ಸಂಗೀತ ಮುಗಿಯುತ್ತದೆ.

ಕ್ಷಯ–ವರ್ಧನ

ಸಾಮೂಹಿಕ ವಸತಿ ಗೃಹಗಳಿರುವ ಒಂದು ಹೊರ ವಿಸ್ತರಣೆಯ ದೂರಚಿತ್ರ. ಸಮಯ ರಾತ್ರಿ. ರಿಚಿ ಆತುರಾತುರವಾಗಿ ಒಂದು ಕಟ್ಟಡದ ಕಡೆ ನಡೆಯುತ್ತಿದ್ದಾನೆ.

ಆ ಕಟ್ಟಡದಿಂದ ಸಂಗೀತ ಕೇಳಿ ಬರುತ್ತಿದೆ.

ಒಂದು ಇಳಿ ಏಣಿಯಲ್ಲಿ ರಿಚಿ ಇಳಿಯುತ್ತಿದ್ದಾನೆ. ಮುಂದ ಪ್ರಕಾಶವಿರುವ ವಿಸ್ತಾರವಾದ ಮೊಗಸಾಲೆಯೊಂದಕ್ಕೆ ಪ್ರವೇಶಿಸುತ್ತಾನೆ. ಕೆಮೆರಾ ಅವನನ್ನು ಅನುಸರಿಸುತ್ತಿದೆ. ಅದು ಕಾರ್ಮಿಕರ ಕ್ಲಬ್ಬಿನ ಸಂತೋಷಕೂಟದ ಸ್ಥಳ.

ಚೌಕಟ್ಟಿನ ಹೊರಗಿಂದ ಒಂದು ಭಾಷಣ ಕೇಳುತ್ತದೆ.

ಭಾಷಣಕಾರ : ಕೆಲಸ ಖಾಲೀನೇ ಇಲ್ಲದೇ ಇರೋವಾಗ ಜನಕ್ಕೆ ಕೆಲಸ ಸಿಗೋದು ಹ್ಯಾಗೆ ಸಾಧ್ಯ ? ಈ ಬಗ್ಗೆ ನಮ್ಮ ಸಂಘ ಕಾರ್ಮಿಕ ಕಛೇರಿಗೆ ವಿಷಯ ತಿಳಿಸಿದೆ. ದಾನ, ಧರ್ಮ ಇವೆಲ್ಲದ್ರಿಂದ ಈ ಸಮಸ್ಯೆ ಪರಿಹಾರ ಆಗೋದಿಲ್ಲ.

ಚರ್ಚೆ ನಡೆಯುತ್ತಿರುವ ಜಾಗಕ್ಕೆ ರಿಚಿ ಪ್ರವೇಶಿಸುತ್ತಾನೆ. ಕುತೂಹಲ ತೋರಿಸುತ್ತ ಆ ಗುಂಪಿನೊಳಗೆ ಬರುತ್ತಾನೆ. ಭಾಷಣಕಾರ ಕೈಬಾಯಿ ಮಾಡುತ್ತ ಮಾತು ಮುಂದುವರೆಸಿದ್ದಾನೆ.

ಭಾಷಣಕಾರ : ಈಗ ಅಗತ್ಯವಾದ ಕೆಲಸ ಅಂದರೆ ಸಾರ್ವಜನಿಕವಾದ ಒಂದು ಭಾರಿ ಕಟ್ಟಡ ಕಟ್ಟೋ ಯೋಜನೆ. ಅವರು ಈ ಬಗ್ಗೆ ಏನು ಹೇಳಿದರು ಅನ್ನೋದನ್ನ ನೀವು ಇವತ್ತು ಮೀಟಿಂಗ್‌ನಲ್ಲಿ ಕೇಳಿದೀರಿ. ಅದೇ ಹಳೇ ಪುರಾಣಾನ ಮತ್ತೆ ಹೇಳಿದಾರೆ.

ರಿಚಿಯ ಮಧ್ಯ ಸಮೀಪ ಚಿತ್ರಿಕೆ. ತನಗೆ ಪರಿಚಯವಿರುವ ನೇಮಕಾತಿ ಅಧಿಕಾರಿಯ ಹತ್ತಿರ ರಿಚಿ ಹೋಗುತ್ತಾನೆ. ಅವನ ಕಿವಿಯಲ್ಲೇನೊ ಹೇಳುತ್ತಾನೆ.

ಭಾಷಣಕಾರ : ಏಯ್. ನಿನಗೆ ಕೇಳೋ ಇಷ್ಟ ಇಲ್ದಿದ್ರೆ ಆಕಡೆ ಹೋಗು. ಇಲ್ಲಿ ಚರ್ಚೆ ಕೆಡಿಸ್ಬೇಡ.

ರಿಚಿ ಆತುರಾತುರವಾಗಿ ಪ್ರಶ್ನೆ ಮುಗಿಸುತ್ತಾನೆ.

ರಿಚಿ : ಬಿಯಾಕೋ, ಅವನು ಇದಾನ ಇಲ್ಲಿ ?

ಅವನು ಉತ್ತರ ಕೊಡುವುದಿಲ್ಲ. ರಿಚಿ ಕಾರಿಡಾರ್‌ನಲ್ಲಿ ಮುನ್ನಡೆಯುತ್ತಾನೆ. ಕೆಮೆರಾ ಅವನನ್ನನುಸರಿಸುತ್ತದೆ.

ಭಾಷಣಕಾರ : ನಿಮ್ಮನ್ನು ಈ ಯೋಜನೆಯೊಳಗೆ ಸೇರಿಸೋ ಪ್ರಯತ್ನ ಸತತವಾಗಿ ನಾವು ಮಾಡ್ತಿದೇವೆ. ನೀವು ಮಾತ್ರ ಏನೋ ಪವಾಡ ಆಗಿ ಬಿಡುತ್ತೆ ಅಂತ ನಂಬಬೇಡಿ.

ಆ ಮೊಗಸಾಲೆಯ ಇನ್ನೊಂದು ಭಾಗದಿಂದ ಕೇಳಿ ಬರುವ ಸಂಗೀತ ವರ್ಧಿಸಿ ಭಾಷಣ ಅಸ್ಪಷ್ಟವಾಗುತ್ತ ಹೋಗಿ ಕ್ಷೀಣಿಸುತ್ತದೆ.

ಸಂಗೀತ ನಡೆಯುತ್ತಿರುವ ಹಾಲ್ ಕಡೆ ರಿಚಿ ನಡೆಯುತ್ತಿದ್ದಾನೆ. ಒಂದು ಪುಟ್ಟ ರಂಗದ ಮೇಲೆ ಕೆಲವು ಹವ್ಯಾಸಿ ನಟರು ಕೊಂಚ ಗಂಭೀರವಾದ ಕ್ಯಾಬರೆ ಹಾಡನ್ನು ಅಭ್ಯಾಸ ಮಾಡುತ್ತಿದ್ದಾರೆ. ಸ್ಟೇಜ್‌ನ ಸಮೀಪ ಕೂತಿರುವ ಪಿಯಾನೋ ಮುದುಕ ಹಾಡಿನ ಸ್ವರಗಳನ್ನು ಮೆಚ್ಚುತ್ತಿದ್ದಾನೆ. ರಿಚಿ ಹಿಂಬಾಗದ ಬೆಂಚ್ ಒಂದರ ಮೇಲೆ ಕೂರುತ್ತಾನೆ. ರಿಚಿಯ ಸ್ಥಾನದಿಂದ ರಂಗದ ದೃಶ್ಯ ಕಾಣುತ್ತದೆ. ಅಲ್ಲೊಬ್ಬ ಗ್ರಾಮ್ಯ ಭಾಷೆಯಲ್ಲಿ ಶೃತಿ ತಪ್ಪಿ ಹಾಡುತ್ತಿದ್ದಾನೆ.

ಹಾಡುಗಾರ : (ಹಾಡು ಹೇಳಿಕೊಡುತ್ತಿದ್ದಾನೆ)

If you really love me........
If you really love me........

ಬಾಗಿಲಲ್ಲಿ ಒಬ್ಬ ಮನುಷ್ಯ ಪ್ರವೇಶಿಸಿ ಗೋಡೆಯ ಮೇಲೊಂದು ಪೋಸ್ಟರ್ ನೇತು ಹಾಕುತ್ತಾನೆ. ಮನುಷ್ಯ, ಚೌಕಟ್ಟಿನ ಹೊರಗಿರುವ ರಿಚಿಯತ್ತ ತಿರುಗುತ್ತಾನೆ.

ಮನುಷ್ಯ : ಹ್ಯಾಗೆ? ಸರಿಯಾಯಿತಾ ? ನೇತು ಹಾಕಿದ್ದು ?

ರಿಚಿ : (ಬಲವಂತವಾಗಿ ನಗುತ್ತ) ಹೂಂ.

ಹಾಡುಗಾರನಿಗೆ ತನ್ನ ಮೂರ್ಖತನದ ಅರಿವಾಗಿದೆ. ಆತ ಹಾಡು ನಿಲ್ಲಿಸಿ ಭುಜ ಸಂಕೋಚಿಸಿ ನಿಲ್ಲುತ್ತಾನೆ. ಹಿಂದೆ ಹೋಗಿ ಅಲ್ಲಿರುವ ಮೇಳದ ಹುಡುಗಿಯರೊಡನೆ ಸೇರಿಕೊಳ್ಳುತ್ತಾನೆ. ವಿಶಾಲದೇಹಿ ನಿರ್ದೇಶಕ ಬಿಯಾಕೋ ಅತೃಪ್ತಿ ಸೂಚಿಸುತ್ತ ನಡೆದು ಬರುತ್ತಾನೆ. ರಿಚಿ, ಬಿಯಾಕೋಗೆ ಸನ್ನೆ ಮಾಡುತ್ತಾನೆ.

ಬಿಯಾಕೋ : ಮುಂದುವರೆಸಿ. ಒಂದು ನಿಮಿಷ. ಬರ್ತೀನಿ.

ಬಿಯಾಕೋ ರಿಚಿಯ ಹತ್ತಿರ ಬರುತ್ತಾನೆ.

ಬಿಯಾಕೋ : ಏನ್ಸಮಾಚಾರ ?

ರಿಚಿ ಮತ್ತು ಪಕ್ಕದಲ್ಲಿ ಕುಳಿತ ಬಿಯಾಕೋನ ಮಧ್ಯ ಸಮೀಪ ಚಿತ್ರಿಕೆ.

ರಿಚಿ : ನಾನು ನಿನ್ನನ್ನೇ ಹುಡುಕಿಕೊಂಡು ಬಂದೆ.

ಬಿಯಾಕೋ : ಯಾಕೆ ? ಏನಾಯಿತು ?

ರಿಚಿಯ ಸಮೀಪ ಚಿತ್ರ.

ರಿಚಿ : ನನ್ನ ಸೈಕಲ್ ಕಳುವಾಗಿ ಹೋಗಿದೆ.

ಬಿಯಾಕೋನ ಸಮೀಪ ಚಿತ್ರ.

ಬಿಯಾಕೋ : ಆಂ ? ಎಲ್ಲಿ ?

ರಿಚಿ : ಪಿಯೋರಾಲಾದಲ್ಲಿ....ನಾನು ಪೋಸ್ಟರ್ ಅಂಟಿಸ್ತಾ ಇದ್ದಾಗ.

ಬಿಯಾಕೋ : ಹ್ಯಾಗೆ ? ಹ್ಯಾಗೆ ಕಳೆದು ಹೋಯ್ತು ?

ರಿಚಿ : ಬಿಯಾಕೋ, ನೀನು ನನಗೆ ಸಹಾಯ ಮಾಡಬೇಕು.

ನಾನು ಹ್ಯಾಗಾದ್ರೂ ಆ ಸೈಕಲ್ ಹುಡುಕಬೇಕು.

ಬಿಯಾಕೋ : ಹುಡುಕೋದು ?....ಹೇಳೋದು ಸುಲಭ.... ಆದ್ರೆ....

ಸ್ಟೇಜ್‌ನ ದೂರ ಚಿತ್ರ. ನಟರು ಒದ್ದಾಡುತ್ತಿದ್ದಾರೆ. ಹಾಡುಗಾರ ತನ್ನಿಂದ ತಪ್ಪಾದಾಗ ಹುಡುಗಿಯರನ್ನು ದೂಷಿಸುತ್ತಿದ್ದಾನೆ.

ಹಾಡುಗಾರ : ನಿಲ್ಸಿ ನಿಲ್ಸಿ ... ಏಯ್ ಬಿಯಾಕೋ ಈ ಕಡೆ ಸ್ವಲ್ಪ ನೋಡಿಕೋ, ಇಲ್ದೆ ಹೋದ್ರೆ ಬೆಳತನಕ ನಾವು ಹೀಗೇ ಮಾಡ್ತಾನೇ ಇರಬೇಕಾಗುತ್ತೆ.

ಬಿಯಾಕೋ : (ಕಿರಿಕಿರಿಯಿಂದ) ನೋಡ್ತಾ ಇದೇನೆ ನಾನು. ಕೇಳ್ತಿದೇನೆ.

ಹಾಡುಗಾರ : (ಹಾಡು ಹೇಳಿಕೊಡುತ್ತಾನೆ)

If you really love me .......

ರಿಚಿ ಮತ್ತು ಬಿಯಾಕೋರ ಮಧ್ಯ ಸಮೀಪ ಚಿತ್ರಿಕೆ.

ಬಿಯಾಕೋ : ಇಲ್ಲಿ ಕೇಳಿಕೊಳ್ಳಿ (ಹಾಡುತ್ತಾ)

If you really love me........
really, really, really,

ಬಹಳ ಸುಲಭ ಅದು. ಹಾಂ, ಹೇಳಿ ನೋಡೋಣ.

ಪುನಃ ರಂಗ ಪಿಯಾನೋವಾದಕ ಬಾರಿಸ ತೊಡಗುತ್ತಾನೆ. ಆದರೆ ಹಾಡುಗಾರ ಬೇಸರದಿಂದ ನಿಲ್ಲಿಸಿ ರಂಗದ ಅಂಚಿಗೆ ಬಂದು ಕೂರುತ್ತಾನೆ. ಉಳಿದವರು ಕುಣಿಯುತ್ತಿದ್ದಾರೆ. ಮತ್ತೆ ಬಿಯಾಕೋ ಮತ್ತು ರಿಚಿ.

ಬಿಯಾಕೋ : ಈ ಬೆಳಿಗ್ಗೆ ತುಂಬಾ ಮುಂಚೆ ಹೋಗಿ ವಿಕ್ಟೋರಿಯೊ ಚೌಕದಲ್ಲಿ ಹುಡುಕೋದೊಂದೇ ದಾರಿ. ಮತ್ತೇನೂ ಮಾಡೋಕಾಗಲ್ಲ. ಕಳ್ಳರು ಸಾಧ್ಯವಾದಷ್ಟು ಬೇಗ ಅದನ್ನು ದಾಟಿಸ್ತಾರೆ, ಮನೇಲಂತೂ ಇಟ್ಕೊಳೋದಿಲ್ಲ. ನಾವು ಹುಡುಕ ಬೇಕಾದ್ದು ಅದೇ ಜಾಗ ಅಂತ ನನಗನಿಸ್ತಿಸತ್ತೆ.

ಆ ಹಾಲ್‌ನ ಪ್ರವೇಶದ್ವಾರ. ಅಲ್ಲಿ ಮಾರಿಯಾ ಕಾಣಿಸಿಕೊಳ್ಳುತ್ತಾಳೆ. ಆಕೆ ಅಲ್ಲಿಂದ ಗಂಡನ ಕಡೆ ನಡೆದು ಬರುತ್ತಿರುವಾಗ ಕೆಮೆರಾ ಲಾಳ ತಿರೇಗುತ್ತದೆ.

ಮಾರಿಯಾ : (ಭಯದಿಂದ) ಆಂಟೋನಿಯೋ....

ರಿಚಿ ಆಕಡೆ ತಿರುಗುತ್ತಾನೆ. ಅವನ ಮನಸ್ಸು ಮಾರಿಯಾಳ ಆಗಮನದಿಂದ ಇನ್ನಷ್ಟು

ಕದಡುತ್ತದೆ. ಒಂದು ಕ್ಷಣ ಅವಳನ್ನು ದಿಟ್ಟಿಸುತ್ತಾನೆ, ಮೇಲಕ್ಕೆಳುತ್ತಾನೆ.

ರಿಚಿ : ಮಾರಿಯಾ....

ಮಾರಿಯಾ : ನಿಜವಾ ?

ರಿಚಿ : ನೀನು ಹೀಗೆ ಗೋಗರಿತೀಯಾ ಅಂತಲೇ ನಾ ಮನೆಗೆ ಬರ್ಲಿಲ್ಲ.

ಮಾರಿಯಾ : ಗೋಗರಿಯೋದು ? ಯಾಕೆ ಗೋಗರಿತೇನೆ ? ....ಇಂಥ ಸುದ್ದಿ ಕೇಳಿದ್ರೆ ಇನ್ನೇನು ಮಾಡಬೇಕು ಮತ್ತೆ ? ....ಮತ್ತೆನಾದ್ರೂ ಮಾಡಿದೀಯಾ ನೀನು.

ರಿಚಿ ಮತ್ತೆ ಕೂರುತ್ತಾನೆ.

ಮಾರಿಯಾ : (ಹೊರಗಿನಿಂದ) ಹುಡುಕೀದಿಯಾ ?

ಬಿಯಾಕೋ : ಅಳಬೇಡ ಮಾರಿಯಾ. ಚಿಕ್ಕ ಮಗು ಹಾಗೆ ಮಾಡ್ತಿದೀಯಲ್ಲ ?

ಕಣ್ಣೊರಸಿ ಕೊಳ್ಳುತ್ತಿರುವ ಮಾರಿಯಾರಳ ಸಮೀಪ ಚಿತ್ರಿಕೆ.

ಬಿಯಾಕೋ : (ಹೊರಗಿಂದ) ಅವರು ಸೀಟು, ಹ್ಯಾಂಡಲು, ಬಾರ್ – ಎಲ್ಲ ಬದಲಾಯಿಸ್ತಾರೆ. ಆದರೆ ಬೆಳಗಾಗೋ ಹೊತ್ತಿಗೆ ಅದು ಮಾರ್ಕೆಟ್ಟಿಗಂತೂ ಬಂದೇ ಬರತ್ತೆ. ಹಾಗೆ–ನಾದ್ರೂ ಬಂದರೆ ಹಿಡಿಕೊಂಡು ಬಿಡಬಹುದು. (ಮಧ್ಯ ಚಿತ್ರಿಕೆಯಲ್ಲಿ ಕಾಣುವ ರಿಚಿಗೆ) ಆಂಟೋನೀಯೋ, ನೀ ಮಾತ್ರ ಇವತ್ತು ರಾತ್ರಿ ನಿದ್ದೆಗೆಡಬೇಕಾಗುತ್ತೆ ಅಷ್ಟೆ.

ಮಾರಿಯಾಳ ಸಮೀಪ ಚಿತ್ರ.

ಬಿಯಾಕೊ : (ಹೊರಗಿಂದ) ಮುಖ್ಯವಾದ ಸಂಗತಿ ಗುಂಪಿನೊಳಗಿಂದ ಹುಡುಕಿ ತೆಗೆಯೋದು.... ಹೂಂ ಇರಲಿ ಬಾ, ಈಗ ಸ್ವಲ್ಪ ಖುಶಿಯಾಗಿರು.

ರಂಗದ ಮೇಲೆ ಒಬ್ಬ ನಟ ಇಬ್ಬರು ನಟಿಯರ ಸಮೀಪ ಹೋಗಿ ಬಾಗುತ್ತಿದ್ದಾನೆ.

ನಟ : ಮಹಿಳೆಯರೇ, ಇವತ್ತು ರಾತ್ರಿ ನೀವು ಏನು ಮಾಡ್ತೀರಿ ಅಂತ ನನಗೆ ತಿಳಿಸಬಹುದಾ ?

ನಟಿ : ನನ್ನ ಸ್ನೇಹಿತೆಯೊಬ್ಬಳ ಜೊತೆ ಹೋಗೋದಿದೆ.

ನಟ : ನನ್ನ ಜೊತೆ ವಾಕ್ ಬರಬಹುದು.

ನಟಿ : ಊಹೂಂ. ನನ್ನ ತಾಯಿ ಬರ್ತಿದಾಳೆ.

ಸ್ಟೇಜಿನಿಂದ ಕಾಣುವ ಹಾಲ್‌ನ ದೂರ ಚಿತ್ರಿಕೆ. ಪಕ್ಕದ ಕೋಣೆಯ ರಾಜಕೀಯ

ಚರ್ಚೆ ಮುಗಿಸಿ ಕೆಲವರು ಇಲ್ಲಿ ಗುಂಪು ಗೂಡಿದ್ದಾರೆ. ಸಂಗೀತಗಾರನಿಗೆ ಸಿಟ್ಟು ಬಂದಿದೆ;

ಹಾಡುಗಾರ : (ಹೊಸತಾಗಿ ಬಂದ ಗುಂಪನ್ನುದ್ದೇಶಿಸಿ) ನೋಡಿ, ಹೀಗೆ ಮಾಡಿದ್ರೆ ಆಗಲ್ಲ. ಖಂಡಿತ ಆಗಲ್ಲ. ದಯ ವಿಟ್ಟು ಹೊರಟು ಹೋಗಿ. ಅಥವಾ ನಾವೇ ಹೊರಟು ಹೋಗ್ತೇವೆ.

ಏ, ಮಾನಿಕೋನಿ........ ಇವರನ್ನೆಲ್ಲ ಇಲ್ಲಿಂದ ಕಳಿಸು.

ಮಾನಿಕೋನಿ ಸೇರಿದ ಜನರನ್ನು ಹೊರಗೆ ಕಳುಸುತ್ತಿದ್ದಾನೆ.

ನಟ : ಸರಿ. ಎಲ್ಲ ಹೊರಟು ಬಿಡಿ. ರಿಹರ್ಸಲ್ ಪ್ರಾರಂಭ ಮಾಡ್ತಿದೇವೆ.

ಬಿಯಾಕೋ ರಿಚಿ ಎದ್ದು ನಿಲ್ಲುತ್ತಾರೆ. ಮಾರಿಯಾ ಪಕ್ಕದಲ್ಲಿದ್ದಾಳೆ.

ಬಿಯಾಕೋ : ಹಾಗಾದ್ರೆ, ಗುಡ್‌ನೈಟ್, ಅದನ್ನ ಅಷ್ಟು ತಲೆಗೆ ಹಚ್ಕೋಬೇಡ.

ರಿಚಿ-ಮಾರಿಯಾ : (ಒಟ್ಟಿಗೆ) ಗುಡ್ ನೈಟ್.

ಬಿಯಾಕೋ : (ರಿಚಿಯ ಕೈ ಅಮುಕುತ್ತ) ಏನೂ ಆಗಲ್ಲ, ಎಲ್ಲ ಸರಿ ಹೋಗತ್ತೆ.

ರಿಚಿ ಮಾರಿಯಾ ಎಲ್ಲರೊಡನೆ ಹೊರಹೋಗುತ್ತಿರುವ ಮಧ್ಯ ಚಿತ್ರಿಕೆ.

ಸಂಗೀತದ ಅಬ್ಬರ.

ಕೆಮೆರಾ ಅವರಿಬ್ಬರೂ ಬರುವುದನ್ನು ಮುಂಬದಿಯಿಂದ ಮಧ್ಯಸಮೀಪ ಚಿತ್ರಿಕೆಯಲ್ಲಿ ಕಾಣಿಸುತ್ತ ಹಿಂದಕ್ಕೆ ಚಲಿಸುತ್ತಿದೆ. ಈಗ ಹಿಂಭಾಗದಿಂದ ಅವರು ಮೆಟ್ಟಿಲ ತನಕ ಹೋಗುವುದನ್ನು ಕಾಣಿಸುತ್ತದೆ.

ದೃಶ್ಯ ಕ್ಷಯಿಸಿ ಕತ್ತಲು ಆವರಿಸುತ್ತದೆ.

## ಭಾಗ . ಎರಡು

ದೃಶ್ಯ ವರ್ಧಿಸಿದಂತೆ ದೂರ ಚಿತ್ರಿಕೆಯಲ್ಲಿ ಫಿಯಾಸಾ ವಿಟ್ಟೋರಿಯೋ ಕಾಣುತ್ತದೆ. ಮುಂಜಾವು ; ಮೋಡ ಮುಸುಕಿದ ಮಸಕು ಬೆಳಕು. ಮುಖ ದೀಪ ಮತ್ತು ಒಳ ದೀಪಗಳು ಇನ್ನೂ ಹತ್ತಿರುವ ಒಂದು ಟ್ರಾಂ ಬರುತ್ತಿದೆ, ಬಂದು ನಿಲ್ಲುತ್ತದೆ. ಅದ ರಿಂದ ಇಳಿಯುತ್ತಿರುವ ಜನರ ಜೊತೆ ರಿಚಿ - ಬ್ರೂನೋ ಇಳಿಯುತ್ತಾರೆ. ರಿಚಿ ತನ್ನ ಮಗನ ಕೈ ಹಿಡಿದುಕೊಂಡು ವೇಗವಾಗಿ ಕೆಮೆರಾದತ್ತ ನಡೆದು ಬರುತ್ತಾನೆ. ರಸ್ತೆ ದೀಪ ಆರಿದರೂ ಒಟ್ಟಿನ ಪ್ರಕಾಶ ಬದಲಾಯಿಸಿದಂತೆ ಕಾಣುವುದಿಲ್ಲ. ಬೆಳಗು ಹೆದ ರುತ್ತ ಭೂಮಿಗಿಳಿಯುತ್ತಿರುವಂತೆ ಕಾಣುತ್ತಿದೆ. ಮರದ ಹಿಡಿಕೆಯ ಪೊರಕೆಗಳಿಂದ ರಸ್ತೆ ಗುಡಿಸುವವರು ರಸ್ತೆ ಗುಡಿಸುತ್ತಿದ್ದಾರೆ. ಬದಿಯಲ್ಲಿ ಕಸ ತುಂಬುವ ಮುನಿಸಿ ಪಾಲಿಟಿ ಲಾರಿಗಳು ನಿಂತಿವೆ.

ಸಂಗೀತದ ತುಣುಕು.

ಕೆಮೆರಾ ಮುಂದಕ್ಕೆ ಚಲಿಸಿದಾಗ ಒಂದು ಲಾರಿಯ ಹಿಂದೆ ಏಣಿ ಚಾಚಿರುವುದು, ಆ ಏಣಿಯ ಮೇಲೆ ಬಿಯಾಕೋ ನಿಂತಿರುವುದು ಕಾಣತ್ತದೆ. ಕೈಗಾಡಿಗಳಲ್ಲಿ ಹೇರಿ ತಂದ ಕಸದ ರಾಶಿಗಳನ್ನು ಲಾರಿಯೊಳಗೆ ತುಂಬುವ ಮೇಲ್ವಿಚಾರಕ ಅವನು. ಚೌಕ ಟ್ಟಿನ ಹೊರಗಿರುವ ಡ್ರೈವರನಿಗೆ ಬಿಯಾಕೋ ಕಸ ಇನ್ನಷ್ಟು ಒತ್ತಿ ತುಂಬಲು ಸೂಚನೆ ಕೊಡುತ್ತಿದ್ದಾನೆ.

ಸಂಗೀತ ನಿಲ್ಲುತ್ತದೆ.

ಬಿಯಾಕೋ : ಏ, ಮಾಸಿಕೋನಿ ಇನ್ನಷ್ಟು ಹಚಿ ಬಿಡು. ಇಲ್ದಿದ್ರೆ ಇವತ್ತಿಡೀ ಕೆಲ್ಸ ಮುಗಿಯಲ್ಲ. (ಮತ್ತೊಬ್ಬ ಕಸ ಗುಡಿಸುವವನನ್ನುದ್ದೇಶಿಸಿ) ಆ ಗಾಡಿ ನಡು ರಸ್ತೆಯಲ್ಲಿ ಅಲ್ಲೇನು ಮಾಡ್ತಿದೆ ? ಅಚೀಚೆ ಒಡಾಡೋ ಹಾಗೂ ಇಲ್ಲ. ತಳು ಅದನ್ನ ಆಕಡೆ ;

ಚೌಕದೊಳಿಗೆ ರಿಚಿ ಬ್ರೂನೋ ಪ್ರವೇಶಿಸುತ್ತಾರೆ.

ರಿಚಿ : ಹೇ – ಬಿಯಾಕೋ

ಬಿಯಾಕೋ : ಇಲ್ಲೇ ಇದೇನೆ.

ಬಿಯಾಕೋ ಅಲ್ಲಿಂದ ಕೆಳಗಿಳಿದು ಮುನ್ನೆಲೆಗೆ ರಿಚಿ, ಬ್ರೂನೋ ಇರುವಲ್ಲಿಗೆ ಬರುತ್ತಾನೆ.

ಬಿಯಾಕೋ : (ಹಿಂದಕ್ಕೆ ತಿರುಗಿ) ಹೇ, ಮಾನಿಕೋನಿ, ಬೆಗೊಂಗಿ, ಇಲ್ಲಿ ಬನ್ನಿ. (ರಿಚಿಗೆ) ರಿಚಿ, ಆ ಸೈಕಲ್‌ನ ಬ್ರ್ಯಾಂಡ್ ಯಾವುದು ?

ಬ್ರೂನೋ : (ಉದ್ವೇಗದಿಂದ) ಫೈಡ್ಸ್, ಫ್ಯಡ್ಸ್ ಕಂಪೆನಿಯ ಫ್ರೇಮ್.

ರಿಚಿ : ನೋಡಿದೆಯಲ್ಲ. ನನಗಿಂತ ಅವನಿಗೆ ಚೆನ್ನಾಗಿ ಗೊತ್ತು.

ಬಿಯಾಕೋ : (ಪ್ರೀತಿಯಿಂದ ಬ್ರೂನೋನ ತಲೆಯನ್ನು ತಟ್ಟುತ್ತಾ) ಭೇಷ್, ಭೇಷ್, (ಉಳಿದವರಿಗೆ) ಇಲ್ಲಿ ಕದಿಯೋರ ತಂತ್ರ ಅಂದ್ರೆ ಬಿಚ್ಚಿ ಮಾರೋದು. ಎಲ್ಲಾ ಚೂರು ಚೂರು. ಬೆಗೊಂಗಿ ನಾವೀಗ ಮಾರ್ಕೆಟ್‌ನಲ್ಲಿ ಮಾಡು ಹಾಕಿದಾರಲ್ಲ ಅಲ್ಲಿಗೆ ಹೋಗೋಣ. (ಅವರವರಿಗೆ ಸೂಚಿಸುತ್ತ) ನೀನು ಟೈರ್ ನೋಡು, ನೀನು ಫ್ರೇಮನ್ನೇ ನೋಡ್ತಾ ಹೋಗು:

ಬೆಗೊಂಗಿ : ಓಹೋ – ಆಗಲಿ. ಈ ಹುಡುಗ ಬೆಲ್ಲು ಪಂಪ್ರು ನೋಡಲಿ. (ಬ್ರೂನೋಗೆ) ತಿಳೀತ ?

ಮಾನಿಕೋನಿ : (ಬೆಗೊಂಗಿಗೆ) ನೆನಪಿರಲಿ. ಫ್ರೈಡ್ಸ್ ಫ್ರೇಮ್.

ಬೆಗೊಂಗಿ : (ಭುಜಕುಣಿಸುತ್ತ) ಹೋ ನೆನಪಿದೆ.

ಪುನಃ ದೂರಚಿತ್ರದಲ್ಲಿ ಅವರ ಗುಂಪು ಕೆಮೆರಾವತ್ತ ಬರುತ್ತಿದೆ. ಬಿಯಾಕೋ ಎದುರಿಗೆ, ರಿಚಿ ಬ್ರೂನೋ ಮಾನಿಕೋನಿ ಹಿಂದೆ. ಗುಂಪು ನಡೆಯುತ್ತಿರುವುದು ದೂರ ಚಿತ್ರಿಕೆಯಲ್ಲಿ ಕಾಣುತ್ತಿದೆ.

ಬಿಯಾಕೋ : ಅದರ ಚೂರು ಚೂರನ್ನು ಹುಡುಕಬೇಕು ನಾವು. ಎಲ್ಲಾ ತುಂಡು ಸಿಕ್ತ ಮೇಲೆ ಒಟ್ಟಿಗೆ ಜೋಡಿಸಿದರಾಯಿತು.

ಹಿಂಭಾಗದಿಂದ ಕೆಮೆರಾ ಅವರನ್ನು ಕಾಣಿಸುತ್ತಿದೆ.

ಬಿಯಾಕೋ : ಎಲ್ಲಾ ಅಂಗಡೀಲೂ ಹುಡುಕಬೇಕಾಗುತ್ತೆ.

ಮಾರ್ಕೆಟ್ ರಸ್ತೆಯ ಅಂಗಡಿಗಳು ಬೆಳಗಿನ ವ್ಯಾಪಾರಕ್ಕೆ ತೆರೆದುಕೊಂಡು ಅಣಿಯಾಗುತ್ತಿರುವುದು ಹಿನ್ನೆಲೆಯಲ್ಲಿ ಕಾಣುತ್ತದೆ. ಗುಂಪು ಅತ್ತ ತಿರುಗುತ್ತದೆ.

ಬಿಯಾಕೋ : ಏನೋ ಹುಡುಕ್ತಿದಾರೆ. ಅಂತ ಯಾರಿಗೂ ಗೊತ್ತಾಗಬಾರದು. ಸುಮ್ನೆ ಹೋಗ್ತಿರೋರ ಹಾಗೆ ಇರಬೇಕು.

ಕಮಾನು ಬಾಗಿಲೊಂದರ ಮೂಲಕ ಒಂದು ಸೈಕಲ್ಲಿನ ಗುಂಪನ್ನೇ ತಳ್ಳಿಕೊಂಡು ಬರುತ್ತಿರುವ ಜನರ ಗುಂಪಿನ ದೂರಚಿತ್ರಿಕೆ. ಸೈಕಲ್ ಹುಡುಕುವ ಗುಂಪು ಪ್ರವೇಶಿಸಿ ಸೈಕಲ್ ಗುಂಪನ್ನು ಗಮನಿಸತೊಡಗುತ್ತದೆ.

ಮಾಸಿಕೋನಿ : ನಂಗೆ ಭರವಸೆ ಇದೆ, ಸಿಕ್ಕೇ ಸಿಗತ್ತೆ.

ಬಿಯಾಕೋ : (ಸೂಚಿಸಿ) ಆಕಡೆ ಹೋಗೋಣ.

ಅವರು ಆಕಡೆ ಹೋಗುತ್ತಿದ್ದಂತೆ ಕೆಮೆರಾ ಅನುಸರಿಸುತ್ತದೆ. ಪುನಃ ಒಂದು ಕ್ಷಣ ನಿಲ್ಲುತ್ತಾರೆ.

ಬಿಯಾಕೋ : (ಬ್ರೂನೋಗೆ) ನೀನು ಹೋಗಿ ಬೆಲ್, ಪಂಪ್ ನೋಡ್ತಿರು. ಮತ್ತೇನೋ ನೋಡೋದು ಬೇಡ ನೀನು. ಸಿಕ್ಕರೆ ಸಿಳ್ಳೆ ಹಾಕು. ಅದೇ ಸೂಚನೆ.

ರಿಚಿ ಮತ್ತು ಬ್ರೂನೋ ಮಧ್ಯಸಮೀಪ ಚಿತ್ರಿಕೆಯಲ್ಲಿ ಕಾಣುತ್ತಿದ್ದಾರೆ.

ರಿಚಿ : (ಬ್ರೂನೋನತ್ತ ಬಾಗಿ) ಹುಷಾರಿಂದ ನೋಡು. ಏನಾದ್ರೂ ಸಿಗ್ಲಿ ಅಂದ್ರೆ ಹಬ್ಬ ಮಾಡೋಣ.

ಬಿಯಾಕೋ : ಯೋಚ್ನೆ ಮಾಡ್ಬೇಡ. ಹುಡುಗ ಚುರುಕಾಗಿದಾನೆ ....ಬರ್ತೀಯಾ ಅಂಟೋನಿಯೋ.

ಬ್ರೂನೋ ಒಂದು ಕಡೆಗೂ ಉಳಿದವರು ಒಂದು ಕಡೆಗೂ ಹೋಗುತ್ತಾರೆ. ಕೆಮೆರಾ ಬದಿಯಿಂದ ಚಲಿಸುತ್ತ ಬ್ರೂನೋನನ್ನು ಅನುಸರಿಸುತ್ತದೆ.

ಧ್ವನಿಗಳು : (ಜೋರಾಗಿ ಕೂಗಿಸಿದ) ಬಿಯಾಂಚಿ 25, ಬಿಯಾಂಚಿ 25. ಹೊಸ ಮಾಲು. ಹೊಸಾಹೊಸ ಮಾಲು. ಬನ್ನಿ. ನೋಡಿ ಇಲ್ಲಿ. ಮೂರು ದಿನದ ಹಿಂದೆ ತಯಾರಾದು.

ಮುನ್ನೆಲೆಯಲ್ಲಿ ತಮ್ಮ ಅಂಗಡಿಯಲ್ಲಿ ಕೂತ ಇಬ್ಬರು ಯಾವುದೋ ಬಿಡಿಭಾಗಕ್ಕೆ ಬಣ್ಣ ಬಳಿಯುತ್ತಿದ್ದಾರೆ. ಕೆಮೆರಾದ ಕಡೆ ಮುಖ ಮಾಡಿರುವ ಬ್ರೂನೋ ಹಿನ್ನೆಲೆಯಲ್ಲಿರುವ ಅಂಗಡಿಯ ಯಾವುದೋ ವಸ್ತುವನ್ನು ಕುತೂಹಲದಿಂದ ಪರೀಕ್ಷಿಸುತ್ತಿದ್ದಾನೆ.

ಅಂಗಡಿಯವ : (ಅವನನ್ನು ತಳ್ಳುತ್ತ) ಏಯ್, ಮುಟ್ಬೇಡ.. ನಡಿ ಆಚೆ.

ಮಾಸಿಕೋನಿ ಬೇರೊಂದು ಗಲ್ಲಿಗೆ ತಿರುಗಾಡುತ್ತಿರುವ ಚಿತ್ರಿಕೆ.

ಮಾನಿ ಕೋನಿ : ಬೆಗೊಂಗಿ, ಫ್ರೈಡ್ಸ್, ನೆನಪಿದೆಯಲ್ಲ ?
ನೊಡ್ತಾ ಬಾ.

ಈ ಗುಂಪು ಅಲ್ಲೇ ಸುತ್ತಾಡುತ್ತಿದ್ದಂತೆ ಕೆಮೆರಾ ಅವರನ್ನು ಹಿಂದಿನಿಂದ ಅನುಸರಿಸುತ್ತದೆ. ಹಿನ್ನೆಲೆಯಲ್ಲಿ ರಸ್ತೆ ಬದಿಗೆ ಮಡಚು ಮೇಜಿನ ಮೇಲೆ ತಂಬಾಕು ಹಾಕಿಕೊಂಡ ಇಬ್ಬರು ಆ ಜಾಗಕ್ಕಾಗಿ ಜಗಳ ಕಾಯುತ್ತಿದ್ದಾರೆ. ಸೈಕಲ್‌ಗಳ ಟೈರ್‌ಗಳ ರಾಶಿರಾಶಿ ಯಿರುವ ಸ್ಟಾಲ್‌ಗಳು ಕಾಣುತ್ತವೆ.

ಬಿಯಾಕೋ : (ಹೊರಗಿಂದ) ನಾವು ಬೇರೆಬೇರೆಯಾಗೋಣ.
ಹೀಗೆ ಗುಂಪಾಗಿ ಹುಡುಕೋದು ಸರಿಯಲ್ಲ.

ಸಂಗೀತ ಪ್ರಾರಂಭ.

ಹಿಂದಕ್ಕೆ ಸರಿದ ಕೆಮೆರಾ ಮಧ್ಯಸಮೀಪ ಚಿತ್ರದಲ್ಲಿ ಅಲ್ಲೇ ಹುಡುಕುತ್ತಿರುವ ರಿಚಿ ಯನ್ನು ಕಾಣಿಸುತ್ತದೆ. ಅದೇ ರೀತಿಯಲ್ಲಿ ಅದೇ ಥರದ ಮಧ್ಯಸಮೀಪ ಚಿತ್ರಿಕೆಗಳಲ್ಲಿ ಒಮ್ಮೆ ಮಾನಿಕೋನಿ, ಒಮ್ಮೆ ಬ್ರೂನೋ ಒಮ್ಮೆ ಬಿಯಾಕೋ ಕಾಣಿಸುತ್ತಾರೆ. ಅದಾದ ಮೇಲೆ ಸೈಕಲ್ಲುಗಳು, ಫ್ರೇಮುಗಳು-ಇವುಗಳ ರಾಶಿರಾಶಿ. ಅನಂತರ ಮೇಲು ಕೋನದಿಂದ ಕೆಮೆರಾ ಮಾರ್ಕೆಟ್ಟಿನ ವಿಸ್ತಾರ ದೃಶ್ಯ ಕಾಣಿಸುತ್ತದೆ.

ಮಾರ್ಕೆಟ್ಟಿನ ಗದ್ದಲ ಹೆಚ್ಚಾಗಿ ಸಂಗೀತ ಮುಳುಗಿ ಹೋಗು ತ್ತದೆ.

ಪುನಃ ಇದೇ ಗುಂಪು. ಮಾನಿಕೋನಿ ಓಡಿ ಬರುತ್ತಿದ್ದಾನೆ. ಬಿಯಾಕೋನನ್ನು ಎಳೆ ದೊಯ್ಯಲು ಪ್ರಯತ್ನಿಸುತ್ತಿದ್ದಾನೆ.

ಮಾನಿಕೋನಿ : ಬೇಗ ಬಾ. ಇಲ್ಲೊಂದು ಫ್ರೇಮಿದೆ
ನೋಡು ಬಾ.

ಬ್ರೂನೋ ಒಬ್ಬಂಟಿಯಾಗಿ ಕೆಲವು ಬೆಲ್‌ಗಳ ಕಡೆ ನೋಡುತ್ತಿದ್ದಾನೆ. ಉಳಿದವರ ಗುಂಪು ಒಂದು ಸ್ಟಾಲಿನೆದುರು ಬರುತ್ತದೆ. ಅಲ್ಲಿ ಒಬ್ಬ ಒಂದು ಫ್ರೇಮಿಗೆ ಬಣ್ಣ ಬಳಿಯುತ್ತಿದ್ದಾನೆ.

ಬಣ್ಣಗಾರ : ಏನು ಬೇಕಿತ್ತು ?

ರಿಚಿ : ಆ ಫ್ರೇಮ್ ಯಾವ ಕಂಪನೀದು ?

ಬಣ್ಣಗಾರ : (ಹೆದರಿಸುವಂತೆ) ಯಾಕೆ ? ಅದನ್ನು ಕೊಳ್ಳು
ತೀಯಾ ?

ರಿಚಿ : (ಸಮೀಪ ಚಿತ್ರಿಕೆಯಲ್ಲಿ) ಇಲ್ಲ. (ಮುಂದೆ
ಬಾಗುತ್ತಾನೆ)

ಬಣ್ಣಗಾರ : (ಮೇಲಿನಿಂದ ಕಾಣಿಸುವಂತೆ) ಮುಟ್ಬೇಡ, ಬಣ್ಣ ಹಸಿಯಾಗಿದೆ.

ರಿಚಿ : ಅದರ ನಂಬರ್ ನೋಡಬೇಕು ನಾನು.

ಬಣ್ಣಗಾರ : ಯಾಕೆ ? ನಂಬರ್ ಕೊಂಡುಕೋತೀಯಾ ?

ಇಡೀ ಗುಂಪು ಕಾಣುತ್ತದೆ.

ಬಿಯಾಕೋ : ನಂಬರ್ ಕೊಳ್ಳೋದಿಲ್ಲ. ಆ ನಂಬರ್ ನೋಡಬೇಕು.

ಬಣ್ಣಗಾರ : ನಾನು ಅದನ್ನ ನೋಡೋಕೆ ಬಿಡದೆ ಇದ್ರೆ ?

ರಿಚಿ : ಪೋಲೀಸ್ನೋರನ್ನ ಕರೀತೀವೆ. ಏನ್ ಮಾಡ್ತೀಯಾ ನೋಡ್ತೇವೆ.

ಬಣ್ಣಗಾರ : ಯಾರು ಬೇಕೋ ಕರಕೊಂಬನ್ನಿ.

ರಿಚಿ ಸಿಧ್ಧಾರದಿಂದ ತಿರುಗಿ ನಡೆಯುತ್ತಿರುವುದು ಕೆಳಕೋನದಿಂದ ಕಾಣುತ್ತದೆ.

ಬಣ್ಣಗಾರ : (ಆತಂಕಗೊಂಡು) ನೋಡಿ, ಇದು ಕಳವಾದ ಬೈಸಿಕಲ್ ಅಲ್ಲ, ತಿಳೀತಾ ?

ಬಿಯಾಕೋ : ಕಳುವಾದ್ದು ಅಂತ ಯಾರೂ ಹೇಳಿಲ್ಲ. ನೀನು ನಂಬರ್ ತೋರಿಸಬಹುದಲ್ಲ ?

ಒಳಗಿಂದ ಒಬ್ಬ ಹೆಂಗಸು ಸನ್ನಿ ಹಿಡಿದವಳಂತೆ ಕೂಗುತ್ತ ಬರುತ್ತಾಳೆ.

ಹೆಂಗಸು : ಇಲ್ಲ, ನಂಬರ್ ತೋರಿಸಲ್ಲ.

ಬಣ್ಣಗಾರ : (ಸಮೀಪ ಚಿತ್ರದಲ್ಲಿ) ನಂಬರ್ ಯಾಕೆ ನಿಮಗೆ? ಇದರ ಮೇಲೆ ಬಾಜಿ ಕಟ್ತೀರಾ ?

ಬಿಯಾಕೋ : ಬಾಜಿ ಕಟ್ಟೋದಿಲ್ಲ ನಾವು ಯಾವತ್ತೂ.

ಬ್ರೂನೋ ಇತ್ತ ಬೆಲ್‌ಗಳನ್ನೇ ನೋಡುತ್ತಿದ್ದಾನೆ. ವಯಸ್ಸಾದನೊಬ್ಬ ಅವನ ಹತ್ತಿರ ಬಂದು ಅವನನ್ನು ಗಮನಿಸುತ್ತಿದ್ದಾನೆ. ಆತ ಸಲಿಂಗ ಕಾಮಿಯೆಂಬುದು ವ್ಯಕ್ತವಾಗುತ್ತದೆ. ಆತ ಹುಡುಗನ ಕಡೆ ಬಾಗುತ್ತಾನೆ.

ವಯಸ್ಕ : ಆ ಬೆಲ್ ಬೇಕಾ ? ಅಷ್ಟು ಹೊತ್ತಿಂದ ಅದನ್ನೇ ನೋಡ್ತಿದೀಯಾ.

ಬ್ರೂನೋ ಅಲ್ಲಿಂದ ನಡೆದು ಬಿಡುತ್ತಾನೆ. ಆದರೆ ವಯಸ್ಸಾದವ ಅವನನ್ನು ಬಿಡುವುದಿಲ್ಲ.

ವಯಸ್ಕ : ಬೇಡವಾ ? ನಿಂಗೆ ಬೇಕು ಅದು, ನಂಗೊತ್ತು. (ಮಾರಾಟಗಾರನಿಗೆ) ಎಷ್ಟಾಗತ್ತೆ ಅದಕ್ಕೆ ?

ಮಾರಾಟಗಾರ : ನೂರೈವತ್ತು ಲೈರ್.

ವಯಸ್ಸಾದವ : (ಬೆಲೆ ಹೆಚ್ಚಿರುವುದನ್ನು ಗಮನಿಸಿ) ಯಾಕೆ ಬೇಕು ಅಲ್ವಾ ?

ಬ್ರುನೋ ತಲೆಯಲ್ಲಾಡಿಸುತ್ತಾನೆ. ಇತ್ತ ಬಣ್ಣಗಾರನಿಗೆ ಎದುರಾಗಿ ನಿಂತ ಗುಂಪು ರಿಚಿ ಒಬ್ಬ ಪೋಲೀಸ್‌ನವನ ಜೊತೆ ಬರುತ್ತಾನೆ.

ಪೋಲೀಸ್ : ಈಗ್ಲೆ ಕಂಪ್ಲೇಂಟ್ ಕೊಟ್ಟಿದ್ರೆ ಸರಿಯಾಯ್ತು ಬಿಡಿ. (ಬಣ್ಣಗಾರನಿಗೆ) ಎಲ್ಲಿ ಫ್ರೆಮು ತೋರಿಸು.

ಬಣ್ಣಗಾರ : (ಫ್ರೇಮನ್ನು ಎತ್ತಿಹಿಡಿದು) ನೋಡಿ, ಎಷ್ಟು ನೋಡ್ತೀರೋ ನೋಡಿ. ತನ್ನ ಪಾಡಿಗೆ ತಾನು ಕೆಲಸ ಮಾಡೋಕೂ ನೆಮ್ಮದಿ ಇರಲ್ಲ.

ಪೋಲೀಸ್‌ನವ ಫ್ರೇಂ ಎತ್ತಿಹಿಡಿದು ನಂಬರ್ ಹುಡುಕುತ್ತಿದ್ದಾನೆ. ರಿಚಿ ತಾನೂ ಮುಂದೆ ಬಾಗಿದ್ದಾನೆ.

ಪೋಲೀಸ್ : (ರಿಚಿಗೆ) ಯಾಕೆ ನನ್ನ ಮೇಲೂ ನಂಬಿಕೆ ಇಲ್ವಾ ? (ನಂಬರ್ ಕಷ್ಟದಿಂದ ಓದುತ್ತಾ) 12024....

ರಿಚಿ ನಿರಾಶೆ ಗೊಂಡದ್ದು ಕಾಣುತ್ತದೆ.

ಪೋಲೀಸ್ : ಹೌದಾ ನಿಂದು ?

ರಿಚಿ : ಊಹುಂ.

ಪೋಲೀಸ್‌ನವ ಫ್ರೇಂ ಹಿಂತಿರುಗಿಸುದ್ದಂತೆ ಕೆಮೆರಾಲಾಳ. ಬಣ್ಣಗಾರನಿಗೆ ಈಗ ಧೈರ್ಯ ಬಂದಿದೆ. ಪೋಲೀಸ್ ನವನಿಗೆ ಕೈ ಒರಿಸುವ ಬಟ್ಟೆ ಕೊಡುತ್ತಾನೆ.

ಬಣ್ಣಗಾರ : ಸುಮ್ನೆ ಕೈಯಲ್ಲಾ ಬಣ್ಣ ಮಾಡಿಕೊಂಡ್ರಿ.

ಪೋಲೀಸ್‌ನವ ಕೈಗೆ ಹತ್ತಿದ ಬಣ್ಣ ಒರೆಸಿಕೊಳ್ಳುತ್ತಾನೆ.

ರಿಚಿ : (ಖೇದದಿಂದ)ನಿಮ್ಮನ್ನು ನಂಬೋದಿಲ್ಲ ಅಂತಲ್ಲ........ ಸೈಕಲ್ ಕಳುವಾಯ್ತು ಅಂದರೆ ಅದನ್ನು ನೋಡೋಕೂ ಅಧಿಕಾರ ಇಲ್ಲವಾ ?

ಬಣ್ಣಗಾರ : (ಒರಟಾಗಿ) ನೋಡು, ಯಾರೇನು ತಡದ್ರಾ ?

ಪೋಲೀಸ್ : ಯಾರೂ ತಪ್ಪು ಮಾಡಬಹುದು ಬಿಡಿ.

ಆತ ಬಟ್ಟೆಯನ್ನು ಹಿಂದೆ ಕೊಟ್ಟು ಹೋಗುತ್ತಾನೆ. ಉಳಿದವರು ಅವನ ಕಡೆ ನೋಡುತ್ತಾರೆ. ಅನಂತರ ಗುಂಪಿನ ಮಧ್ಯದೂರ ಚಿತ್ರಿಕೆ–ಬೆನ್ನ ಕಡೆಯಿಂದ. ಮುನ್ನೆಲೆಯಲ್ಲಿ ಬಣ್ಣಗಾರ ಗುಂಪನ್ನೇ ನೋಡುತ್ತ ನಿಂತಿದ್ದಾನೆ.

ಬಣ್ಣಗಾರ : ಈ ಪಿಯಾಸಾ ವಿಟ್ಟೋರಿಯೋದಲ್ಲಿ ಎಲ್ಲ

ಪ್ರಾಮಾಣಿಕರು. ಯಾರೂ ಮೋಸ ಮಾಡೋಲ್ಲ. ಎಲ್ಲರಿಗೂ ಅದು ಗೊತ್ತು. ತಿಳೀತಾ ?

ಮಾನಿಕೋನಿ–ಬಣ್ಣಗಾರ ಪರಸ್ಪರ ಕೆಕ್ಕರಿಸಿ ನೋಡಿಕೊಳ್ಳುತ್ತಾರೆ.

ಬೆಗೊಂಗಿ : ನಡಿ ಹೋಗೋಣ. ಯಾಕೆ ತಲೆ ಕೆಡಿಸ್ಕೋತೀಯಾ ?

ಅವರು ಸ್ಟಾಲ್‌ನಿಂದ ಹೊರಟು ಚಲಿಸುತ್ತಿದ್ದಂತೆ ಕೆಮೆರಾ ಪಾರ್ಶ್ವದಿಂದ ಅವರನ್ನು ಅನುಸರಿಸುತ್ತದೆ. ಅವರು ಈಗ, ಆ ವಯಸ್ಸಾದವ ಬ್ರೂನೊನನ್ನು ಪೀಡಿಸುತ್ತಿರುವ ಅಂಗಡಿಯ ಹತ್ತಿರ ಬರುತ್ತಾರೆ.

ವಯಸ್ಸಾದವ : ಹಾಗಾದ್ರೆ ಮತ್ತೇನಾದ್ರೂ ಬೇಕಾ ನಿಂಗೆ ?

ರಿಚಿ ಬಂದು ತನ್ನ ಮಗನ ಕೈ ಹಿಡಿದು ಕೊಳ್ಳುತ್ತಾನೆ.

ರಿಚಿ : ಬ್ರೂನೋ. ಹೋಗೋಣ ಬಾ. ಸುಮ್ಮನೆ ಅಲೆ ಯೋದು ಬೇಡ.

ಅವರು ಹೊರಟು ಚೌಕಟ್ಟಿನಿಂದ ಮರೆಯಾದ್ದು ಕಂಡು ವಯಸ್ಕ ನಿರಾಶೆಗೊಳುತ್ತಾನೆ. ಪುನಃ ಒಂದು ರಸ್ತೆಯ ದೂರಚಿತ್ರಿಕೆ. ಗುಂಪು ಲಾರಿಗಳತ್ತ ಬರುತ್ತಿದೆ. ಎಲ್ಲರ ಮುಖದಲ್ಲೂ ನಿರಾಶೆ.

ಬಿಯಾಕೋ : (ರಿಚಿಗೆ) ಪೋರ್ಟ್ ಪೋರ್ಟೆಯಲ್ಲಿ ಯಾಕೆ ಪ್ರಯತ್ನಿಸಿ ನೋಡಬಾರದು ? ಮಾನಿಕೋನಿ ನಿಮ್ಮನ್ನು ಲಾರಿಮೇಲೆ ಅಲ್ಲಿಗೆ ಕರೆದೊಯ್ದು ಬಿಡ್ತಾನೆ. ನಾವು ಇಲ್ಲೇ ಇರ್ತೀವೆ........ಹೇಳೋಕೆ ಆಗಲ್ಲ ಸಿಗತ್ತೆ ಅಂತ.

ಕೆಮೆರಾ ಮುಂದಕ್ಕೆ ಸರಿದು ಲಾರಿಯ ಹತ್ತಿರ ನಿಂತ ಅವರ ಮೇಲೆ ಕೇಂದ್ರೀಕರಿಸುತ್ತದೆ.

ಮಾನಿಕೋನಿ : ಏನೋ ಗೊತ್ತಾಗಲ್ಲ. ಇಲ್ಲೇ ಒಳ್ಳೇದು ಅನ್ಸತ್ತೆ ನಂಗೆ. ನಾವು ಬೆಳಿಗ್ಗೆ ಮುಂಚೇನೇ ಅಲ್ಲಿಗೆ ಹೋಗ ಬೇಕಿತ್ತು.

ಬಿಯಾಕೋ : (ತಂದೆ ಮಗನನ್ನು ಲಾರಿ ಹತ್ತಿಸುತ್ತ) ಇವರನ್ನ ಕರಕೊಂಡು ಹೋಗಿ ಬಾ. ನೋಡೋದ್ರಿಂದ ಏನೂ ತೊಂದರೆ ಇಲ್ಲ.

ಮಾನಿಕೋನಿ : ಸರಿ, ನಂಗೇನೂ ತೊಂದರೆ ಇಲ್ಲ.

ಆತ ಲಾರಿಯೆದುರಿಂದ ಬಂದು ಡ್ರೈವರ್ ಸೀಟಿನಲ್ಲಿ ಕೂರುತ್ತಾನೆ. ಬಿಯಾಕೋ ರಿಚಿಯ ಪಕ್ಕದ ಬಾಗಿಲು ಹಾಕುತ್ತಾನೆ.

ಬಿಯಾಕೋ : ಹುಂ ಹೊರಡಿ....ಮೆಲ್ಲಗೆ ಹೋಗು.

ಲಾರಿ ಹೊರಡುತ್ತದೆ.

ಲಾರಿ ರಸ್ತೆಯಲ್ಲಿ ಚಲಿಸುತ್ತಿರುವ ದೂರ ಚಿತ್ರಿಕೆ. ಬಿಯಾಕೋ ಬೆಗೊಂಗಿ ವಾಪಸ್ ಮಾರ್ಕೆಟ್ಟನತ್ತ ನಡೆಯುತ್ತಾರೆ. ಲಾರಿ ಖಾಲಿ ರಸ್ತೆಯೊಂದರಲ್ಲಿ ಚಲಿಸುತ್ತಿರುವ ದೂರ ಚಿತ್ರ. ಆಕಾಶ ಬಿರುಗಾಳಿಯಿಂದ ಕೂಡಿದ್ದು ಅಪರೂಪದ ಕತ್ತಲೆ ಹಬ್ಬಿದೆ.

ಕ್ಷಯ – ವರ್ಧನ

ಲಾರಿಯ ವಿಂಡ್‌ಸ್ಕ್ರೀನ್ ಮೂಲಕ ಕಾಣುವಂತೆ, ರಿಚಿ ಬ್ರೂನೋನನ್ನು ತಬ್ಬಿಕೂತ ಸಮೀಪ ಚಿತ್ರಿಕೆ. ಮಾನಿಕೋನಿ ಡ್ರೈವ್ ಮಾಡುತ್ತಿರುವ ಸಮೀಪ ಚಿತ್ರ. ಮಳೆಯ ಹನಿಗಳು ವಿಂಡ್‌ಸ್ಕ್ರೀನ್‌ಗೆ ಬಂದು ಬಡಿಯ ತೊಡಗುತ್ತವೆ.

ಮಾನಿಕೋನಿ : ಹುಂ ಮತ್ತೊಂದು ಮಳೆಗಾಳಿ. (ವೈಪರ್‌ಗಳನ್ನು ಚಲಿಸುವಂತೆ ಮಾಡುತ್ತಾನೆ.) ಥೂ ಇದೆಂಥಾ ರಗಳೆ. ಭಾನುವಾರವೂ ಬಿಡೋದಿಲ್ಲ ಈ ಮಳೆ. ಒಂದು ಗಂಟೆ ವರೆಗೆ ಕೆಲಸ ಮಾಡಿ ಆಮೇಲೆ ಮನೆಬಾಗಿಲು ಮುಚ್ಚಿ ಕೂತಿರಬೇಕು.

ರಿಚಿ ಮತ್ತು ಬ್ರೂನೋರ ಸಮೀಪ ಚಿತ್ರಿಕೆ.

ಮಾನಿಕೋನಿ : ಹವಾ ಹೀಗಾದ್ರೆ ಮಾಡೋದಾದ್ರೂ ಏನು ? ಸಿನೆಮಾಕ್ಕೆ ಹೋಗಬೇಕು ಅಷ್ಟೆ. ಸಿನೆಮಾ ನೋಡೋದ್ರಲ್ಲಿ ಏನೂ ಸ್ವಾರಸ್ಯ ಇಲ್ಲ ಅನಿಸತ್ತೆ ನಂಗೆ.

ವಿಂಡ್‌ಸ್ಕ್ರೀನ್ ಮುಖಾಂತರ ಕಾಣುವಂತೆ ಲಾರಿಯೆದುರು ಕೊಡೆ ಹಿಡಿದ ಪಾದಚಾರಿ ಒಬ್ಬ ಓಡಿ ರಸ್ತೆ ದಾಟುತ್ತಾನೆ. ಇನ್ನೇನು ಲಾರಿಗೆ ಸಿಗಬೇಕಿತ್ತು. ಸ್ವಲ್ಪದರಲ್ಲಿ ಅಪಘಾತ ತಪ್ಪುತ್ತದೆ. ರಿಚಿ ಬ್ರೂನೋ ಗಾಬರಿಯಾಗಿದ್ದಾರೆ.

ಮಾನಿಕೋನಿ : (ಕೋಪದಿಂದ ಹೊರಗೆ ತಲೆಹಾಕಿ) ಕತ್ತೆನನ ಮಗನೆ, ಕಣ್ಣು ಎಲಿಟ್ಟು ಬಂದಿದೀಯಾ ? ಹತ್ತಿಸ್ತಿದ್ದೆ ಮೇಲೆ.

ಪಾದಚಾರಿ : (ಹೊರಗಿಂದ) ....ಬೋಸಡಿ ಮಕ್ಕಳು....... ಜೋರು ಹೊಡೀತಾರೆ....

ಮಾನಿಕೋನಿ : ರಸ್ತೆಮೇಲೆ ನಡೆಯೋಕೆ ಕಲ್ತುಕೋ ಮುಂಚೆ ಬಡ್ಡೀ ಮಗನೆ. ಹಡಬೇ ಮುಂಡೇ ಮಕ್ಕಳುಗಾಲಿಗೆ ಬಂದು

ಸಿಕ್ಕಿ ಬೀಳ್ತಾವೆ. ಕಡೇಗೆ ನಾವು ಹೋಗಬೇಕು ಮಾವನ ಮನೆಗೆ.

ಲಾರಿ ಓಡುತ್ತಿದೆ. ಮಳೆ ಉಧೋ ಎಂದು ಸುರಿಯುತ್ತದೆ. ರಿಚಿ ಮತ್ತು ಬ್ರೂನೋರ ಹಿಂಬದಿಯಿಂದ ಕೆಮೆರಾ ಮಸುಕಾದ ವಿಂಡ್‌ಸ್ಕ್ರೀನನ್ನು ಕಾಣಿಸುತ್ತಿದೆ. ರಸ್ತೆ ಏನೂ ಕಾಣುವುದಿಲ್ಲ.

ಮಾಸಿಕೋನಿ : ನೋಡಿ, ಹ್ಯಾಗೆ ಸುರೀತಿದೆ. ಇಡೀ ವಾರ ಒಳ್ಳೆ ಹವಾ. ಭಾನುವಾರ ಬಂತು ಅಂದ್ರೆ ಸರಿ, ಶುರು ವಾಯ್ತು ಮಳೆ.

ನೀರು ಪ್ರವಾಹದಂತೆ ಹರಿಯುತ್ತಿರುವ ರಸ್ತೆಗಳಲ್ಲಿ ಲಾರಿ ಓಡುತ್ತಿರುವ ದೂರ ಚಿತ್ರಿಕೆ.

ಸಂಗೀತ.

ರಿಚಿ ಬ್ರೂನೋ ಲಾರಿಯಿಂದಿಳಿದು ಪೋರ್ಟ್ ಪೋರ್ಟ್ ಮಾರುಕಟ್ಟೆಯತ್ತ ಬರುತ್ತಿದ್ದಾರೆ. ಎಲ್ಲೆಲ್ಲೂ ಜನ ಮಳೆಗಾಳಿಯಿಂದ ತಪ್ಪಿಸಿಕೊಳ್ಳಲು ಓಡುತ್ತಿದ್ದಾರೆ. ಹಿನ್ನೆಲೆಯಲ್ಲಿ ಲಾರಿ ಹಿಂತಿರುಗಿ ಓಡುವುದು ಕಾಣುತ್ತದೆ. ಮಾರ್ಕೆಟ್‌ನಲ್ಲಿ ಮಳೆ ಮತ್ತು ಜನರ ಗಲಿಬಿಲಿಯಿಂದ ಉಂಟಾದ ಅನಾಹುತಗಳ ಹಲವಾರು ಚಿತ್ರಿಕೆಗಳು ಕಾಣುತ್ತವೆ. ಅಂಗಡಿಯವರು ತಮ್ಮ ಸರಕುಗಳನ್ನು ಗಾಡಿಗೆ ತುಂಬುತ್ತಿದ್ದಾರೆ. ಒಂದು ಗುಂಪು ಅಸ್ತವ್ಯಸ್ತವಾಗಿ ದಾರಿಗಡ್ಡಲಾಗಿ ನುಗ್ಗಿದೆ. ಇಡೀ ಗೊಂದಲದ ಮಧ್ಯೆ ಬ್ರೂನೋ ಸಿಕ್ಕಿಕೊಂಡಿದ್ದಾನೆ. ರಿಚಿ ಅವನನ್ನು ಹುಡುಕುತ್ತಿದ್ದಾನೆ. ಅಸಹಾಯಕತೆಯ ತುದಿಮುಟ್ಟಿದಂತೆ ಕಾಣುವ ರಿಚಿಯ ಮಧ್ಯಸಮೀಪ ಚಿತ್ರಿಕೆ. ಮುಖ ಒದ್ದೆಯಾಗಿದೆ, ಹೊಳೆಯುತ್ತಿದೆ. ರಿಚಿ ಮುಖ ತಗ್ಗಿಸುತ್ತಾನೆ. ಅವನು ಬಾಗಿದಂತೆ ಕೆಮೆರಾ ಬಾಗಿ ಬ್ರೂನೋನನ್ನು ಕಾಣಿಸುತ್ತದೆ. ಬ್ರೂನೋ ತಲೆಯ ಮೇಲೆ ಕೋಟು ಮುಚ್ಚಿಕೊಂಡಿದ್ದಾನೆ.

ವಸ್ತು ಸಂಗೀತದ ನಾಟಕೀಯ ಉಬ್ಬರ.

ತಂದೆ ತನ್ನತ್ತ ತಿರುಗಿದ್ದು ನೋಡಿ ತಲೆಯೆತ್ತಿ ಆತನ ಕಡೆ ನೋಡುತ್ತಾನೆ. ರಿಚಿ ನಡೆಯುತ್ತಲೇ ಇದ್ದಾನೆ. ಸುಮಾರು ಇಪ್ಪತ್ತು ಜನ ಸೈಕಲ್ ಸವಾರರ ಒಂದು ಗುಂಪು ಹಾದು ಹೋಗುತ್ತದೆ. ಅವರೊಲ್ಲೊಬ್ಬ ಒಂದು ಸೈಕಲ್ ದಬ್ಬಿಕೊಂಡು ನಡೆದಿದ್ದಾನೆ. ಇನ್ನೊಬ್ಬ ಒಂದು ಸೈಕಲ್ ದಬ್ಬಿಕೊಂಡು ಓಡುತ್ತಿದ್ದಾನೆ. ಕೆಲವರು ಕೈಬಿಟ್ಟು ಹೊಡೆಯುತ್ತಿದ್ದಾರೆ. ಕೆಲವರು ಭುಜದ ಮೇಲೆ ಸೈಕಲ್ ಹೊತ್ತಿದ್ದಾರೆ. ಕೆಲವು ಯುವಕರು ಗೋಡೆಗಾನಿಸಿ ನಿಲ್ಲಿಸಿದ ಸೈಕಲ್ ಎತ್ತಿಕೊಂಡು ಚೌಕದ ಹೊರಗಿರುವ ಗಾಡಿಯೊಂದಕ್ಕೆ ಅದನ್ನು ಹೇರುತ್ತಿದ್ದಾರೆ. ವೇಗವಾಗಿ ಓಡುತ್ತಿರುವ ಒಂದು ಗಾಡಿ ಇನ್ನೊಂದು ಗಾಡಿಗೆ ಡಿಕ್ಕಿ ಹೊಡೆಯುತ್ತದೆ. ರಿಚಿ ಮತ್ತು ಬ್ರೂನೋ ಎಲ್ಲಿ ನೋಡ

ಬೇಕು ಏನು ಮಾಡಬೇಕು ತಿಳಿಯದೆ ಹತಾಶರಾಗಿದ್ದಾರೆ. ಸ್ವಲ್ಪ ದೂರದಲ್ಲಿ ಒಂದು ಮನೆಯ ಗೋಡೆಯ ಬದಿ ಖಾಲಿಯಿರುವುದು ರಿಚಿಗೆ ಕಾಣುತ್ತದೆ. ಅವನು ಬ್ರೂನೋ ನನ್ನು ಕರೆಯುತ್ತ ಮಳೆಯಿಂದ ರಕ್ಷಣೆಗೆ ಗೋಡೆಯತ್ತ ಓಡುತ್ತಾನೆ. ಬ್ರೂನೋ ಹಿಂಬಾಲಿಸುತ್ತಾನೆ. ಮಧ್ಯೆ ಜಾರಿ ನೀರು ತುಂಬಿದ ಕಾಲು ದಾರಿಯಲ್ಲಿ ಬೀಳುತ್ತಾನೆ. ರಿಚಿ ಗಮನಿಸುವುದಿಲ್ಲ. ಬ್ರೂನೋ ತಟ್ಟನೆ ಎದ್ದು ತಂದೆಯ ಜೊತೆ ಸೇರಿಕೊಳ್ಳುತ್ತಾನೆ. ರಿಚಿ ಒದ್ದೆಯಾದ ಹ್ಯಾಟ್ ತೆಗೆದು ನೀರು ಕೊಡುವುತ್ತಿರುವ ಮಧ್ಯ ಚಿತ್ರ. ಕರವಸ್ತ್ರ ದಿಂದ ಆತ ಮುಖ ಒರೆಸಿ ಕೊಳ್ಳುತ್ತಾನೆ. ರಿಚಿ ಬಗ್ಗಿದಾಗ ಬ್ರೂನೋ ಕೆಸರು ಮತ್ತು ನೀರನ್ನು ಕೊಡವಿ ಕೊಳ್ಳುವುದು ಕಾಣುತ್ತದೆ.

ರಿಚಿ : (ಕೊಪದಿಂದ) ಏನು ಮಾಡ್ಕಂಡೆ ?

ಬ್ರೂನೋ : (ಸಮರ್ಥಿಸಿಕೊಳ್ಳುವಂತೆ) ಜಾರಿ ಬಿದ್ದೆ.

ರಿಚಿ : (ಸಮಾಧಾನಗೊಂಡು ಕರ್ಚಿಫ್‌ಕೊಟ್ಟು) ತಗೋ ಒರೆಸಿಕೋ.

ಮಧ್ಯ ಸಮೀಪ ಚಿತ್ರದಲ್ಲಿ ಬ್ರೂನೋ ಮೈಕೈ ಕರ್ಚಿಫ್‌ನಿಂದ ಒರೆಸಿಕೊಳ್ಳುತ್ತಿದ್ದಾನೆ. ಬ್ರೂನೋ ಕರ್ಚೀಫ್ ಹಿಂತಿರುಗಿಸುತ್ತಿದ್ದಂತೆ ಕರ್ಚೀಫ್ ಜೊತೆಗೆ ಕೆಮೆರಾ ಲಾಳ ತಿರುಗುತ್ತದೆ. ರಿಚಿ ಒಂದು ಕಣ್ಣಲ್ಲಿ ಮಾರ್ಕೆಟ್ ಚೌಕ ದಿಟ್ಟಿಸುತ್ತ ಮುಖ ಒರೆಸಿ ಕೊಳ್ಳುತ್ತಿದ್ದಾನೆ.

ವಸ್ತು ಸಂಗೀತ ಮುಗಿಯುತ್ತದೆ.

ಮಾರ್ಕೆಟ್ಟಿನ ಚಟುವಟಿಕೆಗಳ ದೂರ ಚಿತ್ರ. ಹಾಳಾಗಿ ಬದಿಗೆ ನಿಲ್ಲಿಸಿರಬಹುದಾದ ಗಾಡಿಗಳ ಗುಂಪಿನಿಂದ ಒಬ್ಬ ಒಂದು ಕೈಗಾಡಿ ದಬ್ಬಿಕೊಂಡು ತಂದು ಇನ್ನೊಂದೆಡೆ ನಿಲ್ಲಿಸಿ ಅದಕ್ಕೆ ನೀರು ತಾಗದಂತೆ ಮೇಣದ ಬಟ್ಟೆಹೊದೆಸುತ್ತಿದ್ದಾನೆ.

ಕೆಲಸಗಾರ : (ಮತ್ತೊಬ್ಬನಿಗೆ) ಹಲೋ. ರಿಫೆಟೋ.

ರಿಫೆಟೋ : ಹಲೋ. ಏನು ಸಮಾಚಾರ ? ಬಟ್ಟೆ ಇದೆ ಅಂತ ಯೋಚ್ನೆ ಮಾಡ್ತಿದೀಯ ?

ಕೆಲಸಗಾರ : ನನಗೆ ಬಟ್ಟೆ ಹಾಕ್ಕೊಂಡೇ ಸ್ನಾನ ಮಾಡೋದು ಇಷ್ಟ ಆಗಲ್ಲ.

ಆತ ಮರೆಯಾಗುತ್ತಾನೆ. ಕೆಮೆರಾ ಮತ್ತೆ ರಿಚಿಯನ್ನು ಕಾಣಿಸುತ್ತದೆ. ರಿಚಿಯ ದೃಷ್ಟಿ ಅತ್ತಲೆ ಇದೆ. ನಂತರ ಸಮೀಪ ಚಿತ್ರದಲ್ಲಿ ಬ್ರೂನೋ. ಆತ ತಂದೆಯನ್ನು ನೋಡುತ್ತಿ ದ್ದಾನೆ. ಮತ್ತೆ ಮಾರ್ಕೆಟ್ಟಿನ ದೂರ ಚಿತ್ರ. ಕೆಲವರು ಸ್ಟಾಲ್ ಮೇಲೆ ಮುಚ್ಚಿದ ಕ್ಯಾನ್‌ವಾಸ್ ಹೊದಿಕೆ ರಿಪೇರಿ ಮಾಡುತ್ತಿದ್ದಾರೆ. ಮತ್ತೆ ರಿಚಿ. ಅವನ ಮುಖದಲ್ಲಿ ಕ್ಷೋಭೆ. ಆಸ್ಟ್ರಿಯನ್ ಪಾದ್ರಿಗಳ ಒಂದು ಗುಂಪು ಅಲ್ಲಿಗೆ ಬರುತ್ತಿದೆ. ಮಳೆಯಿಂದ

ತಡೆಗೆ ಹುಡುಕುತ್ತ ರಿಚಿ ಬ್ರೂನೋ ನಿಂತಲ್ಲಿಗೆ ಅವರು ಬರುತ್ತಾರೆ. ಜರ್ಮನ್ ಭಾಷೆಯಲ್ಲಿ ಹರಟುತ್ತಿದ್ದಾರೆ. ಕೆಮೆರಾ ಲಾಳ ತಿರುಗಿದಂತೆ ಅವರು ಬಂದು ನಿಲ್ಲುತ್ತಾರೆ. ಹರಟೆಯ ಮಾತುಗಳು ಅಸ್ಪಷ್ಟವಾಗುತ್ತವೆ. ಬ್ರೂನೋ ಒಬ್ಬ ಖಾದಕ್ ಮತ್ತು ಅವನ ಮಗನ ಮಧ್ಯ ಸಿಕ್ಕಿಕೊಂಡಿದ್ದಾನೆ. ರಿಚಿಗೆ ಅವರ ಜರ್ಮನ್ ಮಾತುಗಳ ತಲೆ ಬುಡ ಗೊತ್ತಾಗುತ್ತಿಲ್ಲ. ಒಬ್ಬ ಯುವ ಪಾದ್ರಿ ಬ್ರೂನೋನ ಕಡೆ ಮುಗಳ್ನಗೆ ಬೀರುತ್ತಾನೆ. ಬ್ರೂನೋ ಪ್ರತಿಯಾಗಿ ಸ್ನೇಹದ ದೃಷ್ಟಿ ಬೀರುತ್ತಾನೆ. ಮಳೆ ಕಡಿಮೆಯಾಗುತ್ತಿದೆ. ಪಾದ್ರಿಗಳು ಹೊರಡುತ್ತಾರೆ.

ತಟ್ಟನೆ ರಿಚಿಯ ನೋಟ ಮಾರ್ಕೇಟ್‌ನಲ್ಲಿ ನೆಡುತ್ತದೆ.

ಕಾತರದ ಸಂಗೀತ.

ಆತ ಒಂದು ಹೆಜ್ಜೆ ಮುಂದಿಡುತ್ತಾನೆ. ಮತ್ತೆ ಮಾರ್ಕೆಟ್ಟಿನ ದೂರ ಚಿತ್ರ. ಸೈಕಲ್ ಕದ್ದ ಯುವಕನನ್ನು ಹೋಲುವ ಒಬ್ಬ, ಒಂದು ಸೈಕಲ್ಲನ್ನು ವೇಗವಾಗಿ ಓಡಿಸಿಕೊಂಡು ಬಂದು ಒಬ್ಬ ಮುದುಕನ ಬಳಿ ನಿಂತು ಮಾತಾಡುತ್ತಿದ್ದಾನೆ. ಮುದುಕನಿಗೆ ಜೇಬಿನಿಂದ ಒಂದು ನೋಟು ತೆಗೆದು ಕೊಡುತ್ತಿದ್ದಾನೆ. ಅವರಿಬ್ಬರ ಮಧ್ಯ ಸಮೀಪ ಚಿತ್ರ.

ಮುದುಕ : ಇದೇನಿದು ? ಒಂದು ನೂರು ಲೈರ್ ?

ಕಳ್ಳ : ಮತ್ತೆ ಸಿಗ್ತೇನೆ. ಇದಿಷ್ಟು ಇವತ್ತಿಗೆ. ಬೈ.

ಮುದುಕ : ಇಷ್ಟು ಕೊಟ್ರೆ ಏನು ಉಪಯೋಗ ?

ಕಳ್ಳ : (ಹೊರಡುತ್ತ) ಬೈ.

ರಿಚಿ ಹೊರಡುತ್ತಾನೆ. ಕೆಮೆರಾ ಲಾಳತಿರುಗಿ ಅನುಸರಿಸುತ್ತದೆ. ರಿಚಿ ಬ್ರೂನೋ ಬೆನ್ನಟ್ಟುತ್ತಾರೆ.

ರಿಚಿ : ಕಳ್ಳ....ನಿಲ್ಲಿಸಿ ಅವನ್ನ....ಕಳ್ಳ.

ರಿಚಿ ಬೆನ್ನಟ್ಟಿ ಓಡುವ ದೂರ ಚಿತ್ರ. ಈಗಷ್ಟೇ ಮಳೆನಿಂತ ಗಡಿಬಿಡಿಯಲ್ಲಿ ಮಾರ್ಕೆಟ್‌ನ ಜನರಾರೂ ಇವನತ್ತ ಗಮನ ಹರಿಸುವುದಿಲ್ಲ. ದೂರ ಚಿತ್ರದಲ್ಲಿ ಸ್ವಲ್ಪ ಖಾಲಿಯಿರುವ ತುದಿಯತ್ತ ಕಳ್ಳ ಓಡುತ್ತಿದ್ದಾನೆ. ರಿಚಿ ಬೆನ್ನಟ್ಟಿದ್ದಾನೆ. ಸ್ವಲ್ಪ ಹೊತ್ತಿಗೇ ರಿಚಿಗೆ ಬೆನ್ನಟ್ಟುವುದು ನಿಷ್ಫಲವೆಂದು ಅರಿವಾಗುತ್ತದೆ. ನಿಲ್ಲುತ್ತಾನೆ. ಹಿಂದೆ ಹೆಜ್ಜೆ ಇಡುತ್ತಾನೆ. ಬ್ರೂನೋ ಇವನನ್ನು ಅನುಸರಿಸಿ ಬರುತ್ತಿದ್ದಾನೆ.

ರಿಚಿ : ಬ್ರೂನೋ ಬೇಗ. ಆ ಮುದುಕನ್ನ ಹಿಡೀಬೇಕು ನಾವು.

ಕೆಮೆರಾದತ್ತ ಓಡುತ್ತಾರೆ. ತಟ್ಟನೆ ಉದ್ವೇಗದಿಂದ ಬ್ರೂನೋ ನಿಲ್ಲುತ್ತಾನೆ.

ಬ್ರೂನೋ : ಪಪಾ, ಅವ ಅಕೋ ಅಲ್ಲಿದ್ದಾನೆ....ಅಲ್ಲಿ.

ಮುದುಕ ರಸ್ತೆಯೊಂದರ ತುದಿಗೆ ಪಲಾಯನಕ್ಕೆ ಪ್ರಯತ್ನಿಸುತ್ತಿರುವ ದೂರ ಚಿತ್ರ.

ಬ್ರೂನೋ ರಿಚಿ ಬೆನ್ನಟ್ಟಿದ್ದಾರೆ. ರಿಚಿ ಬ್ರೂನೋನ ಕೈ ಹಿಡಿದಿದ್ದಾನೆ. ಆದರೆ ತನ್ನ ನಡಗೆ ವೇಗವಾದಾಗ ಬ್ರೂನೋನ ಕೈ ಬಿಡುತ್ತಾನೆ. ಬ್ರೂನೋ ಹೊಂಡಗಳನ್ನು ಹಾರುತ್ತ ರಿಚಿಯನ್ನು ಹಿಂಬಾಲಿಸುತ್ತಿದ್ದಾನೆ. ಅಲ್ಲಿಂದ ರಿಚಿ ಮತ್ತು ಬ್ರೂನೋ ಕಟ್ಟಡಗಳಿಂದ ಮುಸುಕಿದಂತಿರುವ ಚೌಕವೊಂದಕ್ಕೆ ಬರುತ್ತಾರೆ. ಮುದುಕ ಅಲ್ಲಿಲ್ಲ. ಮತ್ತೆ ತಿರುಗಿ ಹಿಂದಕ್ಕೆ ಓಡುತ್ತಾರೆ. ರಿಚಿ ಬಾಗಿಲು ಅರೆತೆರದ ಮನೆಯೊಂದರತ್ತ ಧಾವಿಸುತ್ತಾನೆ. ಬ್ರೂನೋ ಕೂಡ ಬರುತ್ತಾನೆ. ಅರೆತೆರೆದ ಬಾಗಿಲಿಂದ ಖಾಲಿ ಹಜಾರ ಕಾಣುತ್ತದೆ. ಬ್ರೂನೋ ತಟ್ಟನೆ ರಸ್ತೆಗೆ ಧುಮುಕಿ ಅಂಕುಡೊಂಕು ರಸ್ತೆಯಲ್ಲಿ ಓಡುತ್ತಾನೆ.

ರಿಚಿ : ಎಲ್ಲಿ ಹೋದ ಆ ಮುದಿ ಸೂಳೇಮಗ ?........
ಬ್ರೂನೋ ಎಲ್ಲಿಗೆ ಹೊರಟೆ ?

ಕೆಮೆರಾ ಬ್ರೂನೋನ ಅಂಕುಡೊಂಕು ಹಾದಿಯನ್ನು ಕಾಣಿಸುತ್ತದೆ. ರಿಚಿ ಚೌಕ ದೊಳಗೆ ಪ್ರವೇಶಿಸುವಷ್ಟರಲ್ಲಿ ಬ್ರೂನೋ ರಸ್ತೆಯ ಮುಂದಿನ ತಿರುವಿಗೆ ಹೋಗಿ ಮುಂದೆ ನೋಡಿ ಇಲ್ಲ ಎಂದು ಸನ್ನೆ ಮಾಡುತ್ತಾನೆ. ಮತ್ತೆ ಮೊದಲ ಹಾಗೇ ಇನ್ನೊಂದು ಓಣಿಯತ್ತ ಓಡುತ್ತಾನೆ. ರಿಚಿ ಮತ್ತೊಂದು ರಸ್ತೆಯಲ್ಲಿ ನೋಡುತ್ತಾನೆ. ತೆರೆದಿರುವ ಇನ್ನೊಂದು ಬಾಗಿಲಲ್ಲಿ ಇಣಕುತ್ತಾನೆ. ಫಕ್ಕನೆ ಮುದುಕ ಮತ್ತು ಬ್ರೂನೋ ಇಬ್ಬರೂ ಕಾಣದಾಗಿ ಇನ್ನೂ ಒಂದು ರಸ್ತೆಯತ್ತ ನಡೆಯುತ್ತಾನೆ. ಅನಂತರ ದೂರ ಚಿತ್ರದಲ್ಲಿ ಒಂದು ಉದ್ದದ ಓಣಿ ಕಾಣುತ್ತದೆ. ತುದಿಯಲ್ಲಿ ಮುದುಕ ಬರುತ್ತಿದ್ದಾನೆ. ಅವನ ಕೈಯಲ್ಲಿ ಕೆಲವು ಟಿನ್ ಬಾಲ್ದಿಗಳಿವೆ. ಕೃತಕವಾಗಿ ನಡೆಯುತ್ತ ಆತ ಅಲ್ಲಿಂದ ಮರೆಯಾಗುತ್ತಾನೆ. ರಿಚಿ ಆ ಓಣಿಯ ತುದಿಗೆ ಬಂದು ನಿಂತು ಕೂಗುತ್ತಾನೆ. ಯಾರೂ ಕಾಣುವುದಿಲ್ಲ. ಏನೂ ಉತ್ತರ ಬರುವುದಿಲ್ಲ. ಅವನು ಈಗ ಬ್ರೂನೋನನ್ನು ಹುಡುಕುತ್ತಿದ್ದಾನೆ. ಮತ್ತೆ ಬ್ರೂನೋ ಹಿಂದೆ ಧುಮುಕಿ ಓಡಿದ ಓಣಿ ಕಾಣುತ್ತದೆ. ಬ್ರೂನೋ ಅಲ್ಲಿ ನಿರಾಶನಾಗಿ ಹಿಂತಿರುಗುತ್ತಿದ್ದಾನೆ. ಒಂದು ಕ್ಷಣ ಸುತ್ತ ನೋಡಿದ ಬ್ರೂನೋ ಚಡ್ಡಿ ಗುಂಡಿ ಬಿಚ್ಚುತ್ತ ಗೋಡೆಯ ಬದಿಗೆ ಹೋಗುತ್ತಾನೆ. ಬಿಚ್ಚಿ ಇನ್ನೇನು ಉಚ್ಚೆ ಹೊಯ್ಯಬೇಕು, ಆಗ ಚೌಕಟ್ಟಿನಲ್ಲಿ ರಿಚಿ ಕಾಣಿಸಿಕೊಳ್ಳುತ್ತಾನೆ.

ರಿಚಿ : ಬ್ರೂನೋ, ಮುದುಕ ಸಿಕ್ಕಿದ. ಬಾ, ಬೇಗ.

ಬೆಚ್ಚಿ ಬ್ರೂನೋ ತಿರುಗುತ್ತಾನೆ. ಉಚ್ಚೆ ಹೊಯ್ಯದೆ ತಂದೆಯತ್ತ ಓಡುತ್ತಾನೆ. ರಿಚಿ ಜೋರಾಗಿ ಮುದುಕನತ್ತ ನಡೆಯುತ್ತಿರುವುದನ್ನು ಕೆಮೆರಾ ಅನುಸರಿಸುತ್ತದೆ. ಬ್ರೂನೋ ಗುಂಡಿ ಹಾಕಿಕೊಳ್ಳುತ್ತ ಹಿಂಬಾಲಿಸುತ್ತಿದ್ದಾನೆ. ಹಿಂಭಾಗದಿಂದ ಮುದುಕನ ಮಧ್ಯಸಮೀಪ ಚಿತ್ರ. ರಿಚಿ ಬ್ರೂನೋ ಅವನಿಗೆ ಹತ್ತಿರಾಗುತ್ತಿದ್ದಾರೆ.

ಮೂವರೂ ಒಂದು ಸೇತುವೆಯ ಮೇಲೆ ಹೋಗುತ್ತಿದ್ದಂತೆ ಕೆಮೆರಾ ಪಾರ್ಶ್ವದಿಂದ ಮಧ್ಯಸಮೀಪ ಚಿತ್ರದಲ್ಲಿ ಅವರನ್ನು ಅನುಸರಿಸುತ್ತದೆ.

ಕಾತರದ ಸಂಗೀತ ಕೊನೆಗೊಳ್ಳುತ್ತದೆ.

ರಿಚಿ : ಕ್ಷಮಿಸಿ. ನಿಮ್ಮ ಹತ್ರ ಸ್ವಲ್ಪ ಮಾತಾಡಬೇಕಿತ್ತು.... ನಿಮ್ಮ ಹತ್ರ ಮಾತಾಡ್ತಿದ್ದನಲ್ಲ ಆ ಹುಡುಗ, ಅವನನ್ನು ನಾನು ಸ್ವಲ್ಪ ನೋಡಬೇಕು. ಎಲ್ಲಿ ಸಿಗ್ತಾನೆ ಅವನು ?

ಮುದುಕ : ಯಾವ ಹುಡುಗ ?

ರಿಚಿ : ಅದೇ ಸೈಕಲ್ ಮೇಲೆ ಬಂದನಲ್ಲ, ನೀವು ಮಾತಾಡಿದಿರಿ ನೋಡಿ.

ಮುದುಕ : ಯಾಕೆ ? ಅವನೇನು ಮಾಡಿದ ನಿಮಗೆ ?

ರಿಚಿ : ಯಾಕಿಲ್ಲ. ಏನೋ ಸ್ವಂತದ ವಿಷಯ ಅಷ್ಟೆ. ಸ್ವಲ್ಪ ಅವಸರದ ವಿಚಾರ.

ಮುದುಕ : ನನಗೊತ್ತಿಲ್ಲ. ನನಗೆ ಅವನ ಗುರುತು ಕೂಡ ಇಲ್ಲ.

ರಿಚಿ : ಆದ್ರೆ ಅವನು ನಿಮ್ಜೊತೇನೇ ಇದ್ದ. ಅಲ್ಲಿ ಆರ್ಕೇಡ್ ಹತ್ರ, ಫೋರ್ಟಾ ಪೋರ್ಟೆಯಲ್ಲಿ.

ಮುದುಕ : ಅಂದ್ರೆ ನಿಮಗೆ ಅಲ್ಲಿ ಯಾವಾಗ್ಲೂ ಠಳಾಯಿಸ್ತಿರ್ತಾರಲ್ಲ ಅಂಥ ಯುವಕರು ಬೇಕಾ ?

ಮೇಲಿನ ಮಾತಿನ ತುದಿಗೆ ನಾವು ಬ್ರೂನೋ ಈ ಮಾತು ಕೇಳ್ತಿರುವ ಪ್ರತಿಕ್ರಿಯಾ ಚಿತ್ರಿಕೆಯನ್ನು ಕಾಣುತ್ತೇವೆ.

ರಿಚಿ : (ಹೊರಗಿಂದ) ಹೋಯ್. ಬನ್ನಿ. ಇಲ್ಲಿಕೇಳಿ.

ಮಧ್ಯಸಮೀಪ ಚಿತ್ರದಲ್ಲಿ ರಿಚಿ ಮುದುಕನ ಕಾಲರ್ ಹಿಡಿದು ಎಳೆಯುತ್ತಿದ್ದಾನೆ.

ರಿಚಿ : ನನಗೆ ಅವನು ಬೇಕು. ಅವನು ಎಲ್ಲಿದಾನೆ.... ಅಂತ ಹೇಳಬೇಕು ನೀವು.

ಮುದುಕ : (ಬಿಡಿಸಿಕೊಳ್ಳುತ್ತ) ಇಲ್ನೋಡಿ. ಹೀಗೆಲ್ಲ ಮಾಡಬೇಡಿ. ನೀವು ಯಾರು ಅಂತ ತಿಳ್ಕೊಂಡಿದೀರಿ ?

ಬ್ರೂನೋ ಆ ಮುದುಕನ ಕೋಟನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ. ಮುದುಕ ಕೊಡವಿ ಬಿಡಿಸಿಕೊಳ್ಳುತ್ತಾನೆ.

ಮುದುಕ : ಬಿಡು ನನ್ನ. ಇಂಥ ಮುದುಕನ್ನ ಗೋಳು ಹೊಯ್ಕೋಕೆ ನಾಚಿಕೆ ಆಗಬೇಕು ನಿನಗೆ. ಎಂಥಾ ಕಾಲ ಬಂತಪ್ಪಾ.

ಸೇತುವೆಯ ಗುಂಟ ಆ ಮುದುಕ ನಡೆಯುತ್ತಿರುವಂತೆ ಕೆಮೆರಾ ಅನುಸರಿಸುತ್ತದೆ. ತುದಿಗೆ ಕೆಮೆರಾ ಲಾಳ ತಿರುಗುತ್ತದೆ. ಮುದುಕ ಓಡತೊಡಗುತ್ತಾನೆ.

ಕ್ಷಯ–ವರ್ಧನ

ದೂರ ಚಿತ್ರದಲ್ಲಿ ಒಂದು ಚೌಕದ ಬದಿಗಿರುವ ಚರ್ಚ್. ವಾಸ್ತು ಅಷ್ಟೇನೂ ಗಣನೀಯವಾಗಿಲ್ಲ. ಅದರ ಬದಿಗೇ ಧರ್ಮಶಾಲೆಯ ಪಾದ್ರಿಗಳ ನಿವಾಸವೋ ಎನ್ನಬಹುದಾದ ಕಟ್ಟಡವೊಂದಿದೆ. ಅಂದು (ಭಾನುವಾರ) ಅಲ್ಲಿ ಬಡವರು ಮತ್ತು ದಲಿತರಿಗೆ ಉಚಿತ ಊಟ, ಕ್ಷೌರದ ಸೌಲಭ್ಯ. ರಿಚಿ ಬ್ರೂನೋ ಚೌಕವನ್ನು ಪ್ರವೇಶಿಸಿ ಕೆಮೆರಾದತ್ತ ಓಡುತ್ತ ಬಂದು ಚರ್ಚಿನೆದುರು ನಿಲ್ಲುತ್ತಾರೆ. ಚರ್ಚಿನ ಬಾಗಿಲಿನ ಮಧ್ಯಚಿತ್ರ ಕಾಣುತ್ತದೆ. ಹರಕು ಬಟ್ಟೆ ತೊಟ್ಟ ಹೆಂಗಸರು ಮಕ್ಕಳು ಒಬ್ಬರನ್ನೊಬ್ಬರು ತಳ್ಳುತ್ತ ಒಳ ನುಗ್ಗುತ್ತಿದ್ದಾರೆ, ರಿಚಿ ಮತ್ತು ಬ್ರೂನೋ ಬಾಗಿಲಿನ ಹತ್ತಿರ ಹೋಗುತ್ತಾರೆ. ಮತ್ತೆ ಚರ್ಚಿನ ಒಳ ಭಾಗದಿಂದ ಕಾಣುವ ಹೊರ ಬಾಗಿಲಿನ ಚಿತ್ರಿಕೆ. ಜನ ಒಳ ನುಗ್ಗುತ್ತಿದ್ದಾರೆ. ಭ್ರಾಂತನಾದ ರಿಚಿ ಒಂದು ಕ್ಷಣ ಬಾಗಿಲ ಹತ್ತಿರ ನಿಲ್ಲುತ್ತಾನೆ. ಬ್ರೂನೋ ಜತೆಗಿದ್ದಾನೆ.

ಚರ್ಚ್‌ಹಾಲ್-ವೇ ಯಲ್ಲಿ ಜನ ಕಿಕ್ಕಿರಿದಿದ್ದಾರೆ. ಚರ್ಚಿನ ಭಾರೀ ಎತ್ತರದ ಮಾಡು ಕಾಣಿಸುತ್ತದೆ.

ಆರ್ಗನ್ ನಲ್ಲಿ ಧಾರ್ಮಿಕ ಸಂಗೀತವನ್ನು ಬಾರಿಸಲಾಗುತ್ತಿದೆ. ಪ್ರಾರ್ಥನೆ ನಡೆದಿದೆ.

ಹೊರ ಚಾವಡಿಯಲ್ಲಿ ಬಿಳಿ ಕಪನಿಯನ್ನು ತೊಟ್ಟ ಒಬ್ಬ ಗಂಭೀರ ವ್ಯಕ್ತಿ ಒಬ್ಬ ಮುದುಕನಿಗೆ ಮುಖಕ್ಷೌರ ಮಾಡುತ್ತಿದ್ದಾನೆ. ಅನೇಕರು ಕ್ಷೌರದ ಸರದಿಗಾಗಿ ಕಾಯುತ್ತಿದ್ದಾರೆ. ಇನ್ನೊಂದು ಕಡೆ ಕಣ್ಣಿಗೆ ಹೊಡೆಯುವ ಬಣ್ಣಬಣ್ಣದ ಬಟ್ಟೆ ಧರಿಸಿದ ಹೆಂಗಸೊಬ್ಬಳು ಬಡ ಜನನನ್ನು ಬಾಗಿಲಕಡೆ ಹೋಗಲು ನಿರ್ದೇಶಿಸುತ್ತಿದ್ದಾಳೆ; ಮುಖದಲ್ಲಿ ಸೊಕ್ಕು ಎದ್ದು ಕಾಣುತ್ತಿದೆ. ಆಕೆ, ಹಿಂದೆ ರಿಚಿ ಹಿಡಿದುಕೊಂಡಿದ್ದ ಮುದುಕನ ಸಮೀಪ ಬರುತ್ತಿದ್ದಂತೆ ಆತ ಹ್ಯಾಟ್ ತೆಗೆದು ಗೌರವ ಸೂಚಿಸುತ್ತಾನೆ.

ಹೆಂಗಸು : ತಡವಾಗಿ ಬಂದೆ ನೀನು. ಹತ್ತು ಗಂಟೆಗೆ ಇಲ್ಲಿರಬೇಕಿತ್ತು.

ಅಲಂಕಾರವಾಗಿ ವಸ್ತ್ರತೊಟ್ಟ ತರುಣನೊಬ್ಬ ಕೆಲವು ಜನರನ್ನು ಬದಿಗೆ ತಳ್ಳಿ ನಡೆದು ಹೋಗುತ್ತಾನೆ.

ತರುಣ : ಹಾಂ. ಹೋಗಿ ಮುಂದೆ. ಇಲ್ಲೇ ನಿಲ್ಲಬೇಡಿ.

ಮುದುಕ : (ಹೆಂಗಸಿಗೆ) ಕ್ಷಮಿಸಿ. ನನಗೆ ಗೊತ್ತಿರಲಿಲ್ಲ.

ಯಾವಾಗ಼್ ತೆರೆದಿರುತ್ತೆ ಇದು ಅಂತ ಯಾರೋ ಅಂದ್ರು. ಮಗುವನ್ನೆತ್ತಿಕೊಂಡ ಹೆಂಗಸೊಬ್ಬಳೊಡನೆ ರಿಚಿ ಒಳಗೆ ಪ್ರವೇಶಿಸುತ್ತಾನೆ. ಬಡವರಿಗೆ ಕೆಲವು 'ಸಜ್ಜನರು' ದಾನ ಮಾಡುತ್ತ ಅತ್ತಿತ್ತ ಮೆರೆದಾಡುತ್ತಿದ್ದಾರೆ ರಿಚಿ-ಬ್ರೂನೋ ದಾರಿ ಮಾಡಿಕೊಂಡು ಮುನ್ನಡೆಯುತ್ತಾರೆ. ಕೆಮೆರಾ ಮೇಲೆಕ್ಕೇರಿ, ಕೆಳಕ್ಕಿಳಿದು, ಹಿಂದಕ್ಕೆ ಸರಿಯುತ್ತ ಇವನ್ನೆಲ್ಲ ದಾಖಲಿಸುತ್ತಿದೆ. ಹೆಂಗಸಿನೊಡನೆ ಕೂದಲು ಸರಿ ಮಾಡಿಕೊಳ್ಳುತ್ತಾ ಮಾತಾಡುತ್ತಿರುವ ಆ ಮುದುಕನನ್ನು ರಿಚಿ ತಟ್ಟನೆ ನೋಡುತ್ತಾನೆ. ಕ್ಷೌರ ಮಾಡುತ್ತಿರುವಾತ ರಿಚಿಯ ಪಕ್ಕದಲ್ಲಿ ನಿಂತಿದ್ದು ಯಾರಿಗೋ ಕ್ಷೌರ ಮಾಡುತ್ತಿದ್ದಾನೆ.

ಮುದುಕ : ಈಗ ನಂಗೆ ಊಟ ಸಿಗತ್ತಾ ?

ಹೆಂಗಸು : ಸಾಮೂಹಿಕ ಪ್ರಾರ್ಥನೆ ಆದಮೇಲೆ. ಈಗ ನಿನ್ನ ತಟ್ಟೆ ಕೆಳಗಿಡು.... (ಎಲ್ಲರಿಗೆ) ಹೊಸತಾಗಿ ಬಂದಿರೋರೆಲ್ಲ ಕೇಳಿ. ನಿಮ್ಮ ತಟ್ಟೇನ ಈ ಮೊಗಸಾಲೇಲೇ ಇಟ್ಟಿರಬೇಕು.

ಹೆಂಗಸು ಜನರನ್ನು ಚರ್ಚಿನ ಬಾಗಿಲತ್ತ ಕಳಿಸುತ್ತಿದ್ದಾಳೆ. ಮುದುಕ ಜನರ ಮುಂಭಾಗದಲ್ಲಿದ್ದವನು ಅಲ್ಲಿಂದ ಸರಿದು ಇನ್ನೊಂದು ಬಾಗಿಲಿಗೆ ಹೋಗುತ್ತಾನೆ. ರಿಚಿ ಮತ್ತು ಬ್ರೂನೋ ಒಂದು ಕಿಟಕಿಯ ಬಳಿ ಹೋಗಿ ಆ ಮುದುಕ ಎಲ್ಲಿ ಹೋಗುತ್ತಿದ್ದಾನೆಂದು ನೋಡುತ್ತಾರೆ. ಮೊಗಸಾಲೆಯ ದೂರಚಿತ್ರ. ಅಲ್ಲಿ ಒಂದು ಮೇಜು ಕೆಲವು ದೊಡ್ಡ ದೊಡ್ಡ ಪಾತ್ರೆಗಳು. ಪಕ್ಕದಲ್ಲಿ ನಾಲ್ಕಾರು ಹುಡುಗಿಯರು ಅಡುಗೆ ಮಾಡುತ್ತಿದ್ದಾರೆ. ಮೇಜಿನ ಮೇಲೆ ತಟ್ಟೆಗಳು. ಮುದುಕ ಅಲ್ಲಿರುವ ಹುಡುಗಿಯೊಬ್ಬಳ ಹತ್ತಿರ ಹೋಗುತ್ತಾನೆ.

ಹುಡುಗಿ : ಎಲ್ಲರನ್ನೂ ಚೆನ್ನಾಗಿ ಶಿಸ್ತಿನಿಂದ ನಿಲ್ಲಿಸಬೇಕು ಈ ಸಾರಿ. ಹಿಂದಿನ ಸಲದ ಹಾಗೆ ಆಗಬಾರದು. ಎಲ್ಲರೂ ತಮ್ಮ ತಮ್ಮ ತಟ್ಟೆ-ಲೋಟಾನ್ನೇ ಇಟ್ಟುಕೋ ಬೇಕು.

ಮುದುಕ ಮೇಜಿನ ಮೇಲೆ ತನ್ನ ತಟ್ಟೆಯನ್ನಿಟ್ಟು ಚರ್ಚಿನ ಕಡೆ ಹೋಗುತ್ತಾನೆ. ಚರ್ಚಿನ ಒಳಭಾಗ. ರಿಚಿ ಮುದುಕನತ್ತ ಹೋಗುತ್ತಿದ್ದಾನೆ. ಒಬ್ಬ ಯುವಕ ಅವನನ್ನು ತಡೆಯುತ್ತಿದ್ದಾನೆ.

ಯುವಕ : ಕ್ಷೌರ ಮಾಡಿಸಬೇಕಾ ?

ರಿಚಿ : ಇಲ್ಲ.

ಯುವಕ : ಸರಿ. ಹಾಗಾದ್ರೆ ಒಳಗೆ ನಡಿ.

ಯುವಕ ಹಾದಿ ತೋರಿಸುತ್ತಾನೆ. ಆದರೆ ರಿಚಿ ಹೋಗುವುದಿಲ್ಲ. ಬದಲು ಯುವಕನಕಡೆ ಹೋಗುತ್ತಿದ್ದಾನೆ. ಕ್ಷೌರಿಕರಲ್ಲಿ ಒಬ್ಬ ಮುದಕನ ಕ್ಷೌರ ಮಾಡಲು ತಯಾರಾಗಿದ್ದಾನೆ.

ಕ್ಷೌರಿಕ : ಹಾಂ. ಸರಿ ಕೂತುಕೋ.

ಅವನನ್ನು ಕೂಡಿಸಿ ಕುತ್ತಿಗೆಯ ಸುತ್ತ ಬಿಳಿ ಬಟ್ಟೆ ಸುತ್ತಿದ್ದಾನೆ. ಮತ್ತೆ ರಿಚಿಯ ಮಧ್ಯಚಿತ್ರ. ಆತ ಮುದುಕನತ್ತ ದುರುಗುಟ್ಟಿ ನೋಡುತ್ತಿದ್ದಾನೆ. ಪ್ರಾರ್ಥನಾ ಶಾಲೆಯ ದೂರ ಚಿತ್ರ. ಹೆಂಗಸು ಹಾಗೆಯೇ ಸಡಗರದಿಂದ ಓಡಾಡುತ್ತಿದ್ದಾಳೆ. ಆಕೆ ರಿಚಿ ಮತ್ತು ಬ್ರೂನೋರನ್ನು ಹಾದು ಕ್ಷೌರಿಕನ ಹತ್ತಿರ ಹೋಗುತ್ತಾಳೆ.

ಹೆಂಗಸು : (ಕ್ಷೌರಿಕನಿಗೆ) ರೆವರೆಂಡ್, ತುಂಬಾ ಹೊತ್ತಾಗತ್ತಾ ?

ರೆವರೆಂಡ್ : ಇಲ್ಲ ಇನ್ನೇನು ಮುಗಿಸಿಬಿಟ್ಟೆ. ಇವನು ಒಬ್ಬನೆ ಅಷ್ಟೆ.... ಮತ್ತೆ, ಓ ಅವನೊಬ್ಬ (ರಿಚಿಯನ್ನು ಸೂಚಿಸುತ್ತಾನೆ.)

ರಿಚಿ : ಇಲ್ಲ ಇಲ್ಲ ನಂಗೆ ಬೇಡ.

ಹೆಂಗಸು : ಹಾಗಾದ್ರೆ....ನೀವು ಬೇಗ ಮುಗ್ಸಿದ್ರೆ ಇನ್ನೇನು ಪ್ರಾರ್ಥನೆ ಶುರು ಆಗಿಬಿಡುತ್ತೆ.

ರೆವರೆಂಡ್ : ಸರಿ ಸರಿ.

ಆಕೆ ಅಲ್ಲಿಂದ ಹೋಗುತ್ತಾಳೆ. ಮುದುಕ ಮುಖಕ್ಕೆ ಸೋಪು ಹಚ್ಚುತ್ತಿರುವ ರೆವರೆಂಡ್‌ನ ಮಧ್ಯಚಿತ್ರ. ಮುದುಕ ಕಾತರದಿಂದ ಒಂದು ಕಣ್ಣಲ್ಲಿ ರಿಚಿಯನ್ನೇ ನೋಡುತ್ತಿದ್ದಾನೆ. ರಿಚಿ ದುರುಗುಟ್ಟಿ ನೋಡುತ್ತಿದ್ದಾನೆ. ಮತ್ತೆ ಮುದುಕನ ಸಮೀಪಚಿತ್ರ. ಆತ ರಿಚಿಯನ್ನು ದುರುಗುಟ್ಟಿ ನೋಡಿ ದೃಷ್ಟಿಯಲ್ಲಿ ಸೋಲಿಸಲು ಪ್ರಯತ್ನಿಸಿ ಸೋತು ದೃಷ್ಟಿ ಕೆಳಗೆ ಹಾಕುತ್ತಾನೆ. ಬ್ರೂನೋನ ಮಧ್ಯಸಮೀಪ ಚಿತ್ರ. ಆತ ದೊಡ್ಡವನಂತೆ ಕಾಣುತ್ತಿದ್ದಾನೆ. ಗಡ್ಡದ ಮೇಲೆ ಕೈಯಿಟ್ಟು ದಿಟ್ಟಿಸುತ್ತಿದ್ದಾನೆ. ಅತಿ ಸಮೀಪ ಚಿತ್ರ – ಮುದುಕನ ಕೆನ್ನೆಯಮೇಲೆ ರೇಜರ್ ಚಲಿಸುತ್ತಿದೆ.

ಮುದುಕ : ದಯವಿಟ್ಟು ಗಡ್ಡ ಬಿಟ್ಟುಬಿಡಿ ಸಾರ್. ಆಚೆ ಈಚೆ ತೆಗೀರಿ. ಇಷ್ಟು ಗಡ್ಡ ಬಿಡೋಣ ಅಂತಿದೇನೆ.

ಹೆಂಗಸು : (ಹೊರಗಿಂದ) ಬೇಗ···· ಬೇಗ. (ದೂರಚಿತ್ರದಲ್ಲಿ) ರೆವರೆಂಡ್, ಪಾದ್ರಿಗಳು ಕಾಯ್ತಿದಾರೆ. ಉಳಿದದ್ದು ಆಮೇಲೆ ಮಾಡಬಹುದು.

ಹೆಂಗಸು ಇತ್ತ ತಿರುಗುತ್ತಾಳೆ. ಬ್ರೂನೋನನ್ನು ಕಂಡವಳು ಕೈ ಹಿಡಿಯುತ್ತಾಳೆ.

ಹೆಂಗಸು : ಬಾ ಮಗೂ. ಬಾ. ನನ್ನ ಜೊತೆ ಬಾ.

ಮುದುಕ ಕ್ಷೌರದ ಕುರ್ಚಿಯಿಂದಿಳಿಯುತ್ತಿರುವಂತೆ ಬ್ರೂನೋ ಹೇಗೋ ತಪ್ಪಿಸಿಕೊಂಡು ತಂದೆಯ ಬಳಿ ಬರುತ್ತಾನೆ.

ರೆವರೆಂಡ್ : (ತನ್ನ ಕಪನಿ ಕಳಚಲು ಯತ್ನಿಸುತ್ತ)

ಯಾರಾದ್ರೂ ಸ್ವಲ್ಪ ಸಹಾಯ ಮಾಡ್ತೀರಾ ? ನನಗೆ ಸಿಗ್ತಾ ಇಲ್ಲ.
ರಿಚಿ ಮತ್ತು ಬ್ರೂನೋ ಮುದುಕನ ಬೆನ್ನು ಹತ್ತಿ ಚರ್ಚಿನ ಬಾಗಿಲಿಗೆ ಹೊಗುತ್ತಾರೆ. ಚರ್ಚ್‌ಹಾಲ್‌ನ ದೂರಚಿತ್ರ. ಈಗ ಪೂರ್ತಿ ತುಂಬಿದೆ. ಆರ್ಗನ್ 'ಆವೆ ಮಾರಿಯಾ' ಹಾಡನ್ನು ಬಾರಿಸುತ್ತದೆ. ಕೂಡಿದ ಬಡ ಜನರಲ್ಲಿ ಕೆಲವರು ಕುಳಿತುಕೊಳ್ಳುತ್ತಾರೆ. ರಿಚಿ ಮತ್ತು ಬ್ರೂನೋ ಹಿಂಬದಿಯಲ್ಲಿದ್ದಾರೆ. ಗುಂಪಿನಲ್ಲೇ ದಾರಿ ಮಾಡಿಕೊಳ್ಳುತ್ತಾ ಅವರು ಭಾರೀ ಸ್ತಂಭವೊಂದರತ್ತ ಹೋಗುತ್ತಿರುವುದನ್ನು ಕೆಮೆರಾ ಲಾಳ ತಿರುಗಿ ಕಾಣಿಸುತ್ತದೆ. ಹಿನ್ನೆಲೆಯಲ್ಲಿ ಚರ್ಚಿನ ಮುಖ್ಯ ಪಾದ್ರಿಗಳು ಉಳಿದ ಯುವ ಪಾದ್ರಿಗಳೊಂದಿಗೆ ಮೇಲಿನ ವೇದಿಕೆಯಿಂದ ಕೆಳಗಿಳಿಯುತ್ತಿರುವುದು ಕಾಣುತ್ತದೆ. ಮುಂದಿನ ಸಾಲುಗಳಲ್ಲಿ ಕೂತ ದಾನಿಗಳಾದ ಹೆಂಗಸರು ಮಧ್ಯಸಮೀಪ ಚಿತ್ರದಲ್ಲಿ ಕಾಣುತ್ತಾರೆ. ನಂತರ ಗುಂಪಿನ ಚಿತ್ರ. ಗುಂಪಿನ ಒಂದು ಭಾಗದಲ್ಲಿ ಆ ಮುದುಕ ಯಾವುದೋ ಇಬ್ಬರು ವ್ಯಕ್ತಿಗಳ ಮಧ್ಯ ಭಯಗ್ರಸ್ತನಾಗಿ ಮುದುಡಿ ಕೂತಿದ್ದಾನೆ. ಆತ ಎತ್ತಲೋ ದಿಟ್ಟಿಸುತ್ತಿದ್ದಾನೆ. ಸ್ಥಂಭದ ಹತ್ತಿರ ನಿಂತ ರಿಚಿಯ ಮಧ್ಯಚಿತ್ರ. ಫಕ್ಕನೆ ಆತನಿಗೆ ಮುದುಕ ಕಾಣುತ್ತಾನೆ. ಆತ ಬ್ರೂನೋನನ್ನು ಅಲ್ಲೇ ನಿಂತಿರುವಂತೆ ಸನ್ನೆಮಾಡಿ ಒಂದು ಸಾಲು ಹಿಡಿದು ಕೆಳಕ್ಕಿಳಿದು ಮುದುಕನಿರುವಕಡೆ ಬರುತ್ತಾನೆ. ಕಷ್ಟದಿಂದ ಒಬ್ಬಿಬ್ಬರನ್ನು ತಳ್ಳಿ ಜಾಗ ಮಾಡಿಕೊಂಡು ಮುದುಕನ ಪಕ್ಕದ ಸಾಲಿಗೆ ಬಂದು ಸೇರಿಕೊಳ್ಳುತ್ತಾನೆ.

ರಿಚಿ : (ಪಕ್ಕದವನಿಗೆ) ಕೊಂಚ ಆ ಕಡೆ ಜರುಗು.

ರಿಚಿ ಹೇಗೋ ಕಷ್ಟದಿಂದ ಅಲ್ಲೇ ಕೂರುತ್ತಾನೆ. ಮುದುಕ ಮತ್ತು ರಿಚಿ ಒಟ್ಟಿಗಿರುವ ಸಮೀಪ ಚಿತ್ರ. ರಿಚಿ ಮುದುಕನನ್ನು ದಿಟ್ಟಿಸುತ್ತಿದ್ದರೆ, ಮುದುಕ ಚೌಕದಿಂದಾಚೆ ವೇದಿಕೆಯತ್ತ ಕಣ್ಣು ನೆಟ್ಟಿದ್ದಾನೆ. ಮಧ್ಯಚಿತ್ರದಲ್ಲಿ ಪ್ರಾರ್ಥನೆ ಮತ್ತು ಹಾಡಿನ ಪುಸ್ತಕ ಹಂಚುತ್ತ ಬರುತ್ತಿರುವ ಹೆಂಗಸರನ್ನು ತೋರಿಸಿದ ಕೆಮೆರಾ ಅವನೊಡನೆ ಲಾಳ ತಿರುಗುತ್ತ ರಿಚಿ ಮತ್ತು ಮುದುಕ ಕೂತಲ್ಲಿ ನಿಲ್ಲುತ್ತದೆ.

ರಿಚಿ : (ಪಿಸುದನಿಯಲ್ಲಿ) ನಾನು ಅವನನ್ನು ಹುಡುಕಲೇ
ಬೇಕು.... ಅದೇ ಆ ಹುಡುಗ.... ನನಗೆ ಮಾತಾಡೋದಿದೆ
ಅವನ ಹತ್ರ.... ಎಲ್ಲಿರ್ತಾನೆ ಅವನು ಹೇಳು.

ಹಿಂಭಾಗದಲ್ಲಿ ಹೆಂಗಸರು ಪುಸ್ತಕ ಹಂಚುತ್ತಿದ್ದಾರೆ.

ಮುದುಕ : (ಪಿಸುದನಿಯಲ್ಲಿ) ನಾನು ಏನು ಹೇಳಲಿ ? ಆ
ಹುಡುಗ – ಈ ಹುಡುಗ, ಯಾವ ಹುಡುಗನೂ
ಗೊತ್ತಿಲ್ಲ ನನಗೆ.

ವೇದಿಕೆಯ ಹಿಂದಿನಿಂದ ಚರ್ಚ್‌ಹಾಲ್‌ನ ದೂರಚಿತ್ರ. ಮುನ್ನೆಲೆಯ ಪ್ರಾರ್ಥನಾ ವೇದಿಕೆಯ ಕಟಕಟೆಯೊಳಗೆ ಕಾಲು ಮಣೆಯೊಂದರ ಮೇಲೆ ಮುಖ್ಯ ಪಾದ್ರಿ ಕೂತಿದ್ದಾನೆ. ಆತ ಪುಸ್ತಕ ತೆರೆದು ಜನರತ್ತ ದೃಷ್ಟಿ ಬೀರುತ್ತಾನೆ.

ರೆವರೆಂಡ್ : ಪುಟ ಆರು....

ಕನ್ನಡಕ ಏರಿಸಿ ಪ್ರಾರ್ಥನೆ ಆರಂಭಿಸುತ್ತಾನೆ. ಆತನ ಒಂದೊಂದು ಶಬ್ದಗಳನ್ನೂ ಈ ಬಡಸಮೂಹ ಪುನರುಚ್ಚರಿಸುತ್ತದೆ.

ರೆವರೆಂಡ್ : ಈ ಪವಿತ್ರ ಸ್ಥಳದಿಂದ ಹೊರಡುವಾಗ ನನ್ನ ಆತ್ಮ ಪರಿಶುದ್ಧವಾಗಿರಬೇಕು.... ಮನಸ್ಸು ಶಾಂತವಾಗಿರಬೇಕು. ಜೀವನದಲ್ಲಿ ಎದುರಾಗುವ ಎಲ್ಲ ಮಾಂಸದ ದೌರ್ಬಲ್ಯಗಳನ್ನು ನಾನು ಗೆಲ್ಲಲು ಪ್ರಯತ್ನಿಸುತ್ತೇನೆ....ಎಂಬ........

ಕೆಮೆರಾ ಜನರ ಸಾಲುಗಳಲ್ಲಿ ಸಂಚರಿಸುತ್ತ ರಿಚಿ ಮತ್ತು ಮುದುಕ ಕೂತಲ್ಲಿಗೆ ಬಂದು ನಿಲ್ಲುತ್ತದೆ.

ಚೌಕಟ್ಟಿನ ಹೊರಗೆ ಮುಂದುವರೆದ ಪ್ರಾರ್ಥನೆಯ ಸಾಲುಗಳು ಕ್ರಮೇಣ ಅಸ್ಪಷ್ಟವಾಗುತ್ತದೆ.

ರಿಚಿ : ಅವನ ಒಳ್ಳೇದಕ್ಕೇ ಕೇಳ್ತಿರೋದು. ಎಲ್ಲಿರ್ತಾನೆ ಹೇಳು

ಮುದುಕ : ನಾನೇನು ಎಲ್ಲರಿಗೂ ಸಮಾಚಾರ ಒದಗಿಸೋಕೆ ಇರೋವನಲ್ಲ. ನನ್ನಷ್ಟಕ್ಕೆ ನನ್ನನ್ನು ಬಿಡು.

ರಿಚಿ : ನಿನಗೆ ಅವನು ಗೊತ್ತಿದೆ. ನೀನು ಹೇಳಲೇ ಬೇಕು. ಇಲ್ದಿದ್ರೆ ನಾನು ಪೋಲೀಸರನ್ನ ಕರೀತೇನಷ್ಟೆ.

ಮುದುಕ : ನಾನು ನಿಂಗೇನು ಮಾಡಿದೆ ? ಸುಮ್ನೆ ಕಾಡಬೇಡ ನನ್ನ, ಸುಮ್ನಿರು.

ರಿಚಿ : ಅವನು ಎಲ್ಲಿದಾನೆ ಹೇಳು. ಅಷ್ಟೆ ನಂಗೆ ಬೇಕಾದ್ದು. ಅದರಿಂದ ನಿಂದೇನು ಹೋಗತ್ತೆ ? ನಂಗೆ ನಿನ್ನ ಮೇಲೆ ಸಿಟ್ಟಿಲ್ಲ. ನಿಂಗೆ ಬೇಕಾದ್ರೆ ಹಣ ಕೊಡ್ತೇನೆ.

ರಿಚಿ ಪರ್ಸ್ ತೆಗೆಯುತ್ತಿರುವಂತೆ ಮುದುಕ ಅದನ್ನೇ ನೋಡುತ್ತಾನೆ. ಹಿಂದಿನಿಂದ ಒಬ್ಬ ಹೆಂಗಸು ಬಂದು ಇಬ್ಬರಿಗೂ ಊಟದ ಚೀಟಿ ಕೊಟ್ಟು ಮುನ್ನಡೆಯುತ್ತಾಳೆ.

ಮುದುಕ : (ಹೆಂಗಸಿಗೆ) ಇವತ್ತು ಏನು ಊಟ ?

ಹೆಂಗಸು : ಗಂಜಿ ಮತ್ತು ಆಲೂಗಡ್ಡೆ.

ರಿಚಿಯ ಸಮೀಪ ಚಿತ್ರ.

ರಿಚಿ : ಹೇಳ್ತೀಯಲ್ವ ? ಅಲ್ವ ? ನೋಡು ನಾನು ಪೋಲೀಸರ ಹತ್ರ ನಿನ್ನ ಕರ್ಕೊಂಡು ಹೋದ್ರೆ ಆಮೇಲೆ ನಿಂಗೆ

ತಪ್ಪಿಸ್ಕೊಳ್ಳೋಕೇ ಆಗಲ್ಲ. ಎಲ್ಲಿದಾನೆ ಅವನು ಹೇಳಿಬಿಡು.

ಮುದುಕ : ಏನೋ. ವಯಾ ಕಂಪಾನೆಲ್ಲಾದಲ್ಲಿ ಹುಡುಕು. ಸಿಗಬಹುದು.

ರಿಚಿ : ಯಾವ ನಂಬರ್ ?

ಮುದುಕ : ಗೊತ್ತಿಲ್ಲ.... ಬಹುಶಃ ೧೫.... ಅಥವಾ ೨೦ ಇದ್ರೂ ಇರಬಹುದು.

ರಿಚಿ : ಹಾಗಾದ್ರೆ ನೀನೇ ಬಾ ನನ್ನ ಜೊತೆ.

ಮುದುಕ : (ಬೆರಗಿನಿಂದ) ನಾನು ?

ರಿಚಿ : ಹೌದು ನೀನು.

ಹೆಂಗಸು : ಶ್....ಗಲಾಟೆ ಮಾಡಿದ್ರೆ ಹೊರಗೆ ಹಾಕ್ತೇವೆ.

ಮೇಲುಕೋನದಿಂದ ಚರ್ಚಿನ ಹೊರದೃಶ್ಯ. ಮುಚ್ಚಿದ ಬಾಗಿಲೆದುರು ಒಳಹೊಗಲು ಬಾಗಿಲು ದೂಡುತ್ತಿರುವ ಗುಂಪು – ದೂರ ಚಿತ್ರದಲ್ಲಿ.

ಹೆಂಗಸು ರಿಚಿ ಮತ್ತು ಮುದುಕನ ಹಿಂಭಾಗದಿಂದ ಹಾಲ್‌ನ ಹಿಂಬದಿಗೆ ಹೋಗುತ್ತಾಳೆ.

ಜನ ಒಟ್ಟಾಗಿ ಯಾವುದೋ ಪ್ರಾರ್ಥನಾ ಪದ್ಯ ಹೇಳಲು ಪ್ರಾರಂಭಿಸಿದ್ದಾರೆ. ಈ ಪಠನ ದೃಶ್ಯದ ತುದಿಯವರೆಗೂ ಮುಂದುವರೆಯುತ್ತದೆ.

ಮಧ್ಯಸಮೀಪ ಚಿತ್ರದಲ್ಲಿ ರಿಚಿ ಮತ್ತು ಮುದುಕ. ರಿಚಿ ಮುದುಕನನ್ನು ಹೊರಗೆ ಕರೆದೊಯ್ಯಲು ಎಳೆಯುತ್ತಿದ್ದಾನೆ.

ರಿಚಿ : ಬಾ ಹೊರಗೆ. ನಿಂದೇನು ಯೋಗತ್ತೆ ಬಂದ್ರೆ ?

ಮುದುಕ : ನಿನ್ನಷ್ಟಕ್ಕೆ ನೀನು ನಡಿ. ಬರಲ್ಲ ನಾನು.

ರಿಚಿ : ಬೇಡ.... ನನಗೆ ಸಿಟ್ಟು ಬಂದ್ರೆ....

ಮುದುಕ : ನನ್ನ ಪಾಡಿಗೆ ನನ್ನ ಬಿಟ್ಟು ತೆಪ್ಪಗಿರು....

ರಿಚಿ : ಆಯ್ತು. ಪೋಲೀಸರನ್ನೇ ಕರ್ಕೊಂಡ್‌ಬರ್ತೇನೆ.

ಮುದುಕ : ಕರ್ಕೊಂಬಾ. ಸದ್ಯ ನನ್ನ ಪಾಡಿಗೆ ನಾನಿರ್ತೇನೆ ಬಿಡು.

ರಿಚಿ : ( ಮುದುಕನನ್ನು ಒತ್ತಿಕೂರಿಸುತ್ತ ಕ್ರೂರವಾಗಿ ) ಸಾಕು ಹೊರಡು.

ಹೆಂಗಸು : (ತಿರುಗಿ) ಶ್ ಶ್....

ರಿಚಿ ಮುದುಕನನ್ನು ಎಳೆದು ತಳ್ಳಿ ಪೀಡಿಸುತ್ತಿದ್ದಾನೆ.

ರಿಚಿ : ಭಾರೀ ಪಕ್ಕಾ ಇದೀಯೆ ನೀನು. ನಿನ್ನ ಬಿಡಲ್ಲ ನಾನು.

ಮುದುಕ : ನಿನ್ನ ಅದೃಷ್ಟ. ನಾನು ಕೈಲಿ ಹರಿಯುದ ಮುದುಕ ಶಕ್ತಿ ಇರೋರಾಗಿದ್ರೆ ಬಡೀತಿದ್ರು ನಾಲ್ಕು.

ರಿಚಿ : ಮಾತು ಸಾಕು. ಹೊರಡ್ತಿಯೋ ಹೊರಡಿಸಲೋ ?

ಒಬ್ಬ ಹೆಂಗಸು ಮತ್ತು ಯುವಕನ ಮಧ್ಯ ಚಿತ್ರ. ಅವರು ಏನು ಗಲಾಟೆ ನಡೆದಿದೆ ಯೆಂದು ನೋಡಲು ಮುಂದೆ ಬರುತ್ತಿದ್ದಾರೆ. ಕೆಮೆರಾ ಹಿಂದೆ ಸರಿಯುತ್ತಿದೆ. ಮುದುಕನನ್ನು ಎಳೆದಾಡುತ್ತಿರುವ ರಿಚಿಯ ಸಮೀಪ ಚಿತ್ರ.

ಮುದುಕ : ದೈತ್ಯ, ಬಿಡು ನನ್ನ. ನಂಗೆ ಇಷ್ಟ ಇಲ್ದೇ ಇದ್ರೆ ನಿಮ್ಮಪ್ಪ ಬಂದ್ರೂ ಹೊರಗೆ ಎಳಕೊಂಡು ಹೋಗೋಕೆ ಸಾಧ್ಯವಿಲ್ಲ. ತಿಳೀತಾ ?

ರಿಚಿ : ನೋಡು, ಹೊರಡಿಸ್ತೇನೆ.

ರಿಚಿ – ಮುದುಕ ಚಲಿಸಿದಂತೆ ಕೆಮೆರಾ ಸ್ತಂಭದತ್ತ ಲಾಳ ತಿರುಗುತ್ತದೆ.

ಮುದುಕ : ಸ್ವಲ್ಪ ಇರು. ಊಟಾವಾದ್ರೂ ತಗೊಂಡು ಬರ್ತೇನೆ.

ರಿಚಿ : ಆಗಲಿ. ನಾನು ಬರ್ತೇನೆ ನಿನ್ನ ಜೊತೆಗೆ.

ಮುದುಕ : ಅಂತೂ ನನ್ನ ಪಾಡಿಗೆ ನಾನು ತಿನ್ನೋಕೂ ಬಿಡಲ್ಲ ನೀನು.

ಮಧ್ಯಚಿತ್ರದಲ್ಲಿ ಹೆಂಗಸು ಮತ್ತು ಯುವಕ ಈ ಗಲಾಟೆ ಗಮನಿಸುತ್ತಿದ್ದಾರೆ. –

ಹೆಂಗಸು : (ಯುವಕನಿಗೆ) ಹೋಗು.

ರಿಚಿ ಮತ್ತು ಮುದುಕ ಅಲ್ಲಿಂದ ಹೊರಟು ಹೋರಾಂಗಣಕ್ಕೆ ಹೋಗುತ್ತಿದ್ದಾರೆ.

ಯುವಕ : ಏಯ್ ಯಾರದು ? ಹಾಗೆ ಹೋಗೋ ಹಾಗಿಲ್ಲ. ಬಿಡೋದಿಲ್ಲ ಅಲ್ಲಿ.

ಮುದುಕ : ಊಟಕ್ಕೆ ಹೋಗ್ತಿದೇನೆ.

ರಿಚಿ : ನಾನು ಅವನ ಜೊತೆ ಹೋಗ್ಬೇಕು.

ಯುವಕ : ಇಲ್ಲ ಇಲ್ಲ, ಪ್ರಾರ್ಥನೆ ಮುಗೀದೇ ಊಟ ಹಾಕಲ್ಲ. ಶಶ್, ಹೋಗಬೇಡಿ, ಹೋಗಬೇಡಿ.

ಗಂಟೆ ಭಾರಿಸುವ ಶಬ್ದ.

ಎಲ್ಲರೂ ಮೊಳಕಾಲೂರಿ ಕೂರುತ್ತಾರೆ. ಮುದುಕ ಈ ಹೊತ್ತಲ್ಲೇ ತಪ್ಪಿಸಿಕೊಳ್ಳಲು ಹೊಂಚುತ್ತಿದ್ದಾನೆ. ರಿಚಿ ಮತ್ತು ಬ್ರೂನೋ ಅವನ ಬೆನ್ನಟ್ಟಿದ್ದಾರೆ.

ಖಾಲಿ ಕಾರಿಡಾರಿನ ದೂರಚಿತ್ರ. ದೂರದಲ್ಲಿ ರಿಚಿ ಮತ್ತು ಬ್ರೂನೋ ಕೆಮೆರಾದತ್ತ ವೇಗವಾಗಿ ನಡೆದು ಬರುತ್ತಿದ್ದಾರೆ. ನಂತರ ಹೊರಾಂಗಣದ ದೂರಚಿತ್ರ. ಕೆಮೆರಾಕ್ಕೆ

ಬೆನ್ನು ಮಾಡಿ ತಟ್ಟೆಗೆ ಊಟ ಬಡಿಸಿ ಇಡುತ್ತಿರುವ ಹುಡುಗಿಯರತ್ತ ರಿಚಿ–ಬ್ರೂನೋ ನಡೆಯುತ್ತಿದ್ದಾರೆ.

ರಿಚಿ : ಮಿಸ್, ಇಲ್ಲಿಗೆ ಯಾರಾದ್ರೂ ಬಂದ್ರಾ ಈಗ ?

ಹುಡುಗಿ : ಇಲ್ಲ. ಇನ್ನೂ ಹೊತ್ತಾಗಿಲ್ಲ.

ರಿಚಿ ತಿರುಗಿ ವಾಪಸ್ ಬರುತ್ತಾನೆ. ಬ್ರೂನೋ ಒಂದು ಕ್ಷಣ ತಡೆದು ತಂದೆಯನ್ನು ಅನುಸರಿಸುತ್ತಾನೆ. ಕಾರಿಡಾರಿನ ಒಂದು ಬಾಗಿಲಿನಿಂದ ಹೊರ ಹೋಗಲು ರಿಚಿ ಮತ್ತು ಬ್ರೂನೋ ಪ್ರಯತ್ನಿಸುತ್ತಿದ್ದಾರೆ. ಆದರೆ ಅದು ಹೊರಗಿಂದ ಬೀಗ ಹಾಕಿದೆ. ಯುವಕ ಕೋಪದಿಂದ ಚೌಕಟ್ಟಿನೊಳಗೆ ಬರುತ್ತಾನೆ.

ಯುವಕ : ಏನ್ ಮಾಡ್ತಿದೀರಿ ಇಲ್ಲಿ ?

ರಿಚಿ : ನಂಗೆ ಹೊರಗೆ ಹೋಗಬೇಕು.

ಯುವಕ : ಈ ಹಾದೀಲಿ ಹೋಗೋಕೆ ಆಗಲ್ಲ. ರೆವರೆಂಡ್ ಅದನ್ನು ಮುಚ್ಚಿಸಿದ್ದಾರೆ. ಇದು ಚರ್ಚು. ನೀನು ಹಾಗೆಲ್ಲ ಗಲಾಟೆ ಮಾಡಿದರೆ ಸುಮ್ಮನಿರೋದಿಲ್ಲ.

ರಿಚಿ ಮತ್ತು ಬ್ರೂನೋ ಚರ್ಚಿನ ಪ್ರಾರ್ಥನಾ ಮಂದಿರದತ್ತ ಧಾವಿಸುತ್ತಾರೆ. ಚರ್ಚಿನ ಒಳಗೆ, ರಿಚಿಯ ಮಧ್ಯಚಿತ್ರ. ಜನಗಳನ್ನು ತಳ್ಳಿಕೊಂಡು ಆತ ಮುನ್ನುಗ್ಗುತ್ತಿದ್ದಾನೆ. ಬ್ರೂನೋ ಕಷ್ಟದಿಂದ ಅವನನ್ನು ಅನುಸರಿಸಲು ಪ್ರಯತ್ನಿಸುತ್ತಿದ್ದಾನೆ. ಆಗುವುದಿಲ್ಲ, ನಿಲ್ಲುತ್ತಾನೆ. ಕಷ್ಟಪಟ್ಟು ರಿಚಿ ಪ್ರವೇಶದ್ವಾರದತ್ತ ಬರುತ್ತಿರುವ ದೂರಚಿತ್ರ – ಮೇಲುಕೋನದಿಂದ. ಯುವಕ ಆತನ ಬೆನ್ನಟ್ಟಿ ಬರುತ್ತಾನೆ.

ಯುವಕ : ತೊಂದರೆ ಕೊಡೋಕೆ ಬರ್ತೀರಪ್ಪಾ ಚರ್ಚಿಗೆ. ಏನು ಬೇಕು ನಿಂಗೆ ಅಂತಾದ್ರೂ ಹೇಳು, ಹೋಗಲಿ.

ರಿಚಿ : ನಾನು ಅವನನ್ನು ನೋಡಬೇಕು. ಅವನಿನ್ನೂ ಇಲ್ಲೇ ಇರಬೇಕು.

ಬ್ರೂನೋನ ಸಮೀಪ ಚಿತ್ರ. ಆತ ಮುದುಕನಿಗಾಗಿ ಸುತ್ತಲೂ ನೋಡುತ್ತಾನೆ. ತಟ್ಟನೆ ಅನುಮಾನ ಬಂದು ಬದಿಗೆ ತಪ್ಪೊಪ್ಪಿಗೆ ಜಾಗಕ್ಕೆ ಹೋಗಿ ಅಲ್ಲಿನ ತೆರೆ ಸರಿಸಿ ನೋಡುತ್ತಾನೆ. ಮಧ್ಯಸಮೀಪ ಚಿತ್ರದಲ್ಲಿ ಬ್ರೂನೋ, ಆತನಿಗೆ ಹೊಡೆತ ಬೀಳುತ್ತದೆ. ಪಕ್ಕನೆ ತಿರುಗಿ ಬ್ರೂನೋ ತಂದೆಯತ್ತ ಓಡುತ್ತಾನೆ. ಆತನನ್ನು ಯುವಕ ಅಟ್ಟಿಸುತ್ತಲೇ ಇದ್ದಾನೆ. ಚರ್ಚಿನ ಮಧ್ಯೆ ಜನರ ಸಾಲಿನಲ್ಲಿ ಪಾರಿಬಿಟ್ಟಲ್ಲಿಗೆ ಯುವಕ ಬರುತ್ತಾನೆ. ಆತ ಅಲ್ಲಿ ನಿಂತು ಕ್ರಾಸ್ ಚಿನ್ಹೆ ಮಾಡಿಕೊಳ್ಳುತ್ತಾನೆ. ಇತ್ತ ಚರ್ಚಿನ ಪ್ರಸಾದ ಸ್ಥಳಕ್ಕೆ ಹೋಗುವ ಬಾಗಿಲಿನ ಹತ್ತಿರ ರಿಚಿ ನಿಂತಿರುವ ಮಧ್ಯಚಿತ್ರ.

ಯುವಕ : ಅಲ್ಲಿ ಯಾಕೆ ನಿಂತೆ ?

ರಿಚಿ : ಇಲ್ಲಿ ಇದ್ದನಲ್ಲ ಆ ಮುದಕನಿಗಾಗಿ ಹುಡುಕುತ್ತಿದ್ದೀನೆ.

ಮತ್ತೊಬ್ಬ : ಒಳ್ಳೇದು. ಪ್ರಾರ್ಥನೆ ಮುಗಿದ ಮೇಲೆ ಹುಡುಕಿಕೋ. ಏನ್ ರಗಳೆ ಮಾಡ್ತೀರಪ್ಪಾ.

ರಿಚಿಯ ಹಿಂಭಾಗದಿಂದ ಕೆಮೆರಾ ಅನುಸರಿಸುತ್ತಿರುವಂತೆ ರಿಚಿ ಪ್ರಸಾದ ಸ್ಥಳವನ್ನು ಪ್ರವೇಶಿಸುತ್ತಾನೆ. ಅಲ್ಲಿ ಕಾಣುವಲ್ಲೆಲ್ಲ ತೆರೆಗಳು ತೂಗಾಡುತ್ತಿವೆ. ಅನೇಕ ಪ್ರತಿಮೆಗಳಿಂದ ಕೋಣೆ ತುಂಬಿಹೋಗಿದೆ. ಬ್ರೂನೋ ಮತ್ತು ಯುವಕರು ರಿಚಿಯನ್ನು ಹಿಂಬಾಲಿಸಿ ಬರುತ್ತಾರೆ.

ರಿಚಿ : ಅವನು ಇಲ್ಲಿ ಒಳಗಿರಬೇಕು.

ಯುವಕ : ಶ್‌ಶ್.... ಏಯ್.

ರಿಚಿ ಒಂದು ತೆರೆಯನ್ನು ಮೇಲಕ್ಕೆತ್ತುತ್ತಾನೆ. ಅಲ್ಲಿ ಒಂದು ತೆರದ ಕಿಟಕಿ ಇರುವುದನ್ನು ಕಾಣುತ್ತಾನೆ.

ರಿಚಿ : ಇಲ್ಲೇ ಹಾರಿ ಪರಾರಿಯಾಗಿದಾನೆ ಅವನು.

ಯುವಕ : ಹೂಂ. ನೀನೂ ಹೊರಡು ಇಲ್ಲಿಂದ.

ಬ್ರೂನೋ ಮತ್ತು ರಿಚಿ ಆ ಚಿಕ್ಕ ಬಾಗಿಲಿನ ಮೂಲಕ ಹೊರಡುತ್ತಾರೆ.

ಚರ್ಚ್ ಪಕ್ಕದ ಬಯಲು. ರಿಚಿ ಮತ್ತು ಬ್ರೂನೋ ಓಡುತ್ತಿದ್ದಾರೆ.

ಚರ್ಚ್‌ನಿಂದ ಕೇಳಿ ಬರುತ್ತಿರುವ ಪ್ರಾರ್ಥನೆಯ ಕ್ಷೀಣ ಸದ್ದು ಮುಂದು ವರೆದಿದೆ.

ಬ್ರೂನೋ : ಅವನು ಎಲ್ಲಿಗೆ ಹೋದ್ನೋ ದೇವ್ರಿಗೇಗೊತ್ತು.

ರಿಚಿ : (ನಿಲ್ಲುತ್ತ) ಸುಮ್ನಿರು. ಅವನೇನು ಹಾರಿ ಹೋಗಿಲ್ಲ.

ತೆರವಾದ ಬಯಲಿನ ದೂರಚಿತ್ರ. ಅನಂತರ ಕೊಂಚ ಮೇಲುಕೋನದಿಂದ ರಿಚಿಯ ದೃಷ್ಟಿ ಸ್ಥಾನದಿಂದ ಕಾಣುವ, ಬ್ರೂನೋನ ಮಧ್ಯಸಮೀಪ ಚಿತ್ರ.

ಬ್ರೂನೋ : ನಾನಾಗಿದ್ರೆ ಅವನನ್ನ ತಿನ್ನೋಕೆ ಹೋಗೋಕೇ ಬಿಡ್ತಿರಲಿಲ್ಲ.

ರಿಚಿ : (ಕೊಂಚ ಕೆಳಕೋನದಿಂದ ಮಧ್ಯಸಮೀಪ ಚಿತ್ರದಲ್ಲಿ) ತೆಪ್ಪಗಿರು, ಸಾಕು.

ರಿಚಿ ಹೊಡೆಯಲು ಕೈ ಎತ್ತುತ್ತಾನೆ. ಮಧ್ಯಸಮೀಪ ಚಿತ್ರದಲ್ಲಿ ಬ್ರೂನೋನ ಕೆನ್ನೆಯ ಮೇಲೆ ಹೊಡೆತ ಬೀಳುವುದು ಕಾಣುತ್ತದೆ.

ಮೌನ.

ಬ್ರೂನೋ ತಂದೆಯ ಕಡೆ ನೋಡುತ್ತಾನೆ. ರಿಚಿ ತಪ್ಪು ಮಾಡಿದವನ ಹಾಗೆ ಬ್ರೂನೋನತ್ತ ನೋಡುತ್ತಾನೆ. ಆದರೆ ಏನೂ ಹೇಳಲಾರದಾಗಿದ್ದಾನೆ. ಮಧ್ಯಚಿತ್ರದಲ್ಲಿ ಬ್ರೂನೋ ರಸ್ತೆಯ ಬದಿಗೆ ತಂದೆಯಿಂದ ದೂರ ಹೋಗುತ್ತಿದ್ದಾನೆ. ರಿಚಿ ಅವನ ಹಿಂದೆ ಕೆಲವು ಹೆಜ್ಜೆ ನಡೆಯುತ್ತಾನೆ.

ಬ್ರೂನೋ : (ಬಿಕ್ಕುತ್ತ) ನನ್ನ ಸುದ್ದಿ ನಿಂಗೆ ಬೇಡ.

ರಿಚಿ : ಎಲ್ಲಿಗೆ ಹೋಗ್ತಿದೀಯ ?

ಬ್ರೂನೋ : ಮನೆಗೆ ವಾಪಸು.

ರಿಚಿ : ಬ್ರೂನೋ ಬಾ ಇಲ್ಲಿ.

ಬ್ರೂನೋ : ಇಲ್ಲ ನೀ ಹೊಡೀತಿಯೆ.

ರಿಚಿ : ಬಾ.

ಬ್ರೂನೋ : ಇಲ್ಲ.

ರಿಚಿ : ಬಾ ಬೇಗ. ಇಲ್ದಿದ್ರೆ ನಾನೇ ಬಂದು ಎಳ್ಕೊಂಡು ಬರ್‍ತೇನೆ.

ಬ್ರೂನೋ : ಊಹೂಂ. ನಾ ಹೋಗ್ತೇನೆ.

ಬ್ರೂನೋ ಒಂದು ಮರದ ಹಿಂದೆ ಅರ್ಧ ಅಡಗಿ ನಿಂತ ಮಧ್ಯಚಿತ್ರ. ರಿಚಿ ಸುಮಾರು ಇಪ್ಪತ್ತು ಅಡಿ ದೂರದಲ್ಲಿ ನಿಂತು ಆತನನ್ನು ನೋಡುತ್ತಿದ್ದಾನೆ.

ರಿಚಿ : ಬ್ರೂನೋ, ನಾ ಹೇಳಿದ ಹಾಗೆ ಕೇಳು. ನೀನು ಸೊಕ್ಕಿ ಹೋಗಿದೀಯ.

ಬ್ರೂನೋ : ಊಹೂಂ. ಬರಲ್ಲ ನಾನು. ನೀ ಯಾಕೆ ನನ್ನ ಹೊಡೆದೆ ?

ರಿಚಿ : ನೀ ಯಾಕೆ ರಗಳೆ ಮಾಡಿದ್ದು ? ಹೋಗಲಿ, ಬಾ. ಹೋಗೋಣ ಬಾ.

ಬ್ರೂನೊ : ಇಲ್ಲ, ನೀ ಒಬ್ನೇ ಹೋಗು.

ರಿಚಿ : (ಸಿಟ್ಟಾಗಿ, ಸಮೀಪ ಚಿತ್ರದಲ್ಲಿ) ಹೇಳಿದ್ದು ಕೇಳ್ತೀಯಾ—

ಬ್ರೂನೋನ ಮಧ್ಯ ಚಿತ್ರ. ಬಿಕ್ಕುತ್ತ ಕೆಳಗೆ ನೋಡುತ್ತಿದ್ದಾನೆ. ಕೈಗಳನ್ನು ಚಡ್ಡಿಯ ಜೇಬಿಗೆ ಸೇರಿಸಿ ನಿಧಾನವಾಗಿ ತಂದೆಯತ್ತ ಬರುತ್ತಿದ್ದಾನೆ.

ರಿಚಿ : (ಹೊರಗಿಂದ) ಬರೀ ತಂಟೇನೇ ನಿಂದು ನಡಿ.... ನಡಿ.

ಬ್ರೂನೋ ತಂದೆಯ ಬದಿಗೆ ಬರುತ್ತಾನೆ. ಇಬ್ಬರೂ ನಡೆಯತೊಡಗುತ್ತಾರೆ. ಕೆಮೆರಾ ಅನುಸರಿಸುತ್ತದೆ.

ಬ್ರೂನೋ : (ತನ್ನಲ್ಲೇ) ಜೋರಿದಿಯಾ ನೀನು.

ರಿಚಿ : ಸಾಕು. ಬಾಯಿ ಮುಚ್ಚು. ಕೆಟ್ಟ ಹುಡುಗ.

ಬ್ರೂನೋ : ನಾನು ಅಮ್ಮಂಗೆ ಹೇಳ್ತೀನೆ, ನೋಡಬಹುದಂತೆ.

ರಿಚಿ : ಮನೆಗೆ ಹೋಗೋ ತನಕ ತಡೆ.

ವಿಶಾಲವಾದ ರಾಜ ರಸ್ತೆಯೊಂದರ ದೂರಚಿತ್ರ. ಟೈಬರ್ ನದಿಯ ಸೇತುವೆ ಕಾಣುತ್ತಿದೆ. ಬ್ರೂನೋ ಮತ್ತು ರಿಚಿ ನಡೆಯುತ್ತಿದ್ದಾರೆ. ಒಬ್ಬ ಚೌಕಟ್ಟಿನ ಆಚೆ ತುದಿ ಇನ್ನೊಬ್ಬ ಈಚೆ ತುದಿ.

ರಿಚಿ : ಹೋಗಿ ಅಲ್ಲಿ ಸೇತುವೆಯ ಮೇಲೆ ನಿಂತುಕೊಂಡಿರು ಅತ್ತಿತ್ತ ಕದಲಬಾರದು. ನಾನು ಹೋಗಿ ಆ ಮುದುಕನ್ನ ಹುಡುಕ್ತೀನೆ.

ಬ್ರೂನೋ ನಿಧಾನವಾಗಿ ಸೇತುವೆಯತ್ತ ಹೋಗುತ್ತಾನೆ. ರಿಚಿ ನದಿಯ ದಂಡೆಯತ್ತ ಚಲಿಸುತ್ತಿರುವ ದೂರ ಚಿತ್ರ. ಆದಾದ ಮೇಲೆ, ನಿಂತ ಬ್ರೂನೋನ ಮಧ್ಯ ಚಿತ್ರ. ಕೆನ್ನೆಯ ಮೇಲೆ ಕಣ್ಣೀರು. ನಿಶ್ಚಲನಾಗಿ ನಿಂತಿದ್ದಾನೆ.

ರಿಚಿ ನದಿಯ ತೀರದಲ್ಲಿ ಹಾಕಿದ ಒಡ್ಡಿನ ಗುಂಟ ಸುತ್ತಲೂ ನೋಡುತ್ತ ನಡೆಯುತ್ತಿದ್ದಾನೆ.

ದೂರದಲ್ಲಿ ಕೂಗುಗಳು.

ರಿಚಿ ಅಚ್ಚರಿಗೊಳ್ಳುತ್ತಾನೆ.

ಧ್ವನಿ : ಬನ್ನಿ....ಬನ್ನಿ....

ರಿಚಿ ಕಳಕಳಿಯಿಂದ ಸೇತುವೆಯ ಕಡೆ ನೋಡುತ್ತಾನೆ.

ಧ್ವನಿ : ಅಗೋ.... ಅಲ್ಲಿ ಯಾರೋ ಮುಳುಗ್ತಿದಾರೆ........
ಅಯ್ಯೋ ಯಾರನ್ನಾದ್ರೂ ಕರೀರಿ.... ಹೊಳೆಗೆ ಬಿದ್ದ....
ದೋಣಿ ತನ್ನಿ.... ಕಮಾನು ಕೆಳಗೆ.... ಬೇಗ.... ಬೇಗ....

ಈಗ ಭೀತನಾಗಿರುವ ರಿಚಿ ಸೇತುವೆಯ ಕೆಳಭಾಗದ ಕಡೆ ಓಡುತ್ತಿದ್ದಾನೆ. ಕೆಮೆರಾ ಅವನನ್ನು ಅನುಸರಿಸುತ್ತಿದೆ.

ರಿಚಿ : (ಕೂಗುತ್ತಾ) ಬ್ರೂನೋ.... ಬ್ರೂನೋ....

ಧ್ವನಿಗಳು : ಬೇಗ ಓಡಿ ಅಲ್ಲೇ ಮುಂದೆ....

ಕೆಮೆರಾಕ್ಕೆ ಚೆನ್ನಾಗಿ ಹುಚ್ಚನಂತೆ ಸೇತುವೆಯ ಕಡೆ ಓಡುತ್ತಿರುವ ರಿಚಿಯ ದೂರಚಿತ್ರ.

ರಿಚಿ : ಬ್ರೂನೋ.... ಬ್ರೂನೋ....

ಕಮಾನಿನ ಕೆಳಗೆ ಅವನು ಕೂಗುತ್ತ ಓಡಿದಾಗ ಕೂಗು ಮರು ಧ್ವನಿಗೊಳ್ಳುತ್ತದೆ.

ಸೇತುವೆಯ ಇನ್ನೊಂದು ಭಾಗದ ದೂರಚಿತ್ರ. ನದಿಯ ಮಧ್ಯಭಾಗದ ಸುಮಾರಿಗೆ ಸೇತುವೆ ಸ್ತಂಭದ ಹತ್ತಿರ ಒಂದು ದೋಣಿ ಕಾಣುತ್ತಿದೆ. ಆ ದೋಣಿ ಶವವನ್ನು ಸಾಗಿಸಿ ತರುತ್ತಿದೆ. ದಡದಲ್ಲಿರುವ ಕೆಲವರು ಆ ದೇಹವನ್ನು ತೀರಕ್ಕೆ ತರಲು ನೀರಿಗಿಳಿಯುತ್ತಿದ್ದಾರೆ. ಕೆಲವರು ತೀರದಲ್ಲಿ ಕಾಯುತ್ತಿದ್ದಾರೆ. ಮುನ್ನೆಲೆಯಲ್ಲಿ ಕೆಮೆರಾಕ್ಕೆ ಬೆನ್ನಾಗಿ ರಿಚಿ ನೋಡುತ್ತಿದ್ದಾನೆ.

ಚರ್ಚಿನ ಗಂಟೆಗಳ ಶಬ್ದ ಪ್ರಾರಂಭವಾಗುತ್ತದೆ. ಇದು ಈ ದೃಶ್ಯದ ಕೊನೆಯವರೆಗೂ ಮುಂದುವರೆಯುತ್ತದೆ.

ದೋಣಿ ತೀರವನ್ನು ತಲಪುತ್ತಿದೆ. ರಿಚಿಯ ಸಮೀಪ ಚಿತ್ರ. ಆತ ಪೂರ್ತ ಆಘಾತಗೊಂಡಿದ್ದಾನೆ.

ರಿಚಿ : (ತನ್ನೊಳಗೇ) ಬ್ರೂನೋ....

ಧ್ವನಿಗಳು : ಮೆಲ್ಲಗೆ.... ಮೆಲ್ಲಗೆ.... ಅಲ್ಲೇ ಆ ಹುಲ್ಲಿನ ಮೇಲೆ ಮಲಗಿಸಿ....

ಆ ಶವವನ್ನು ತಂದು ನೆಲದ ಮಲಗಿಸುತ್ತಿರುವ ದೂರ ಚಿತ್ರ.

ಧ್ವನಿಗಳು : ತಲೆ ಹುಷಾರು.... ಸ್ವಲ್ಪ ಗಾಳಿ ಹಾಕಿ....

ದೂರಚಿತ್ರದಲ್ಲಿ ಕಾಣುವಂತೆ ಶವ ಒಬ್ಬ ದೊಡ್ಡವನದು, ಮಗುವಿನದಲ್ಲ – ಎಂಬುದು ವ್ಯಕ್ತವಾಗುತ್ತದೆ. ರಿಚಿಯ ಸಮೀಪ ಚಿತ್ರ. ಆತ ಚೇತರಿಸಿ ಕೊಂಡಿದ್ದಾನೆ ನಿಧಾನವಾಗಿ ಕೆಳ ಭಾಗದಿಂದ ಸೇತುವೆಯ ಮೇಲೆ ಹೋಗಲು ಕಟ್ಟಿರುವ ಮೆಟ್ಟಿಲುಗಳತ್ತ ತಿರುಗುತ್ತಾನೆ. ದೂರಚಿತ್ರದಲ್ಲಿ ಮೆಟ್ಟಿಲುಗಳು. ತುತ್ತ ತುದಿಯ ಮೆಟ್ಟಿಲಿನ ಮೇಲೆ ಬ್ರೂನೋ ಕೂತಿದ್ದಾನೆ.

ಧ್ವನಿಗುಳು : (ಹೊರಗಿಂದ) ಸತ್ತಿದಾನಾ ?.... ಇಲ್ಲ........ ಸತ್ತಿಲ್ಲ.... ಏನೂ ಆಗಿಲ್ಲಿ....

ಬ್ರೂನೋನ ಮಧ್ಯಚಿತ್ರ. ಆತ ಓವರ್‌ಕೋಟು ಬಿಚ್ಚುತ್ತ ಕೆಳಗಿನ ಗುಂಪಿನತ್ತ ನೋಡುತ್ತಿದ್ದಾನೆ. ಮತ್ತೆ ರಿಚಿಯ ಸಮೀಪ ಚಿತ್ರ. ಆತ ನೆಮ್ಮದಿಯ ಉಸಿರು ಬಿಡುತ್ತಿದ್ದಾನೆ. ಮತ್ತೆ ಕೆಮೆರಾಕ್ಕೆ ಬೆನ್ನುಮಾಡಿ ಒಂದು ಸಲಕ್ಕೆ ನಾಲ್ಕು ಮೆಟ್ಟಲಂತೆ ಹಾರಿ ಬ್ರೂನೋನ ಕಡೆ ಹೋಗುತ್ತಿರುವ ರಿಚಿಯ ಮಧ್ಯಚಿತ್ರ. ಏದುತ್ತ ಹತ್ತಿ ಬಂದು ಅವನ ಕೋಟು ತೆಗೆದು ಕೊಳ್ಳುತ್ತಾನೆ.

ರಿಚಿ : ಬ್ರೂನೋ. ಕೋಟು ಹಾಕಿಕೊಂಡು ಬಿಡು. ಥಂಡಿಯಾಗತ್ತೆ.

ಸೇತುವೆಯ ಮೇಲೆ ಅವರಿಬ್ಬರೂ ಪಕ್ಕ ಪಕ್ಕದಲ್ಲಿ ಹೋಗುತ್ತಿದ್ದಾರೆ. ಬ್ರೂನೋ ಕೋಟು ಹಾಕಿ ಕೊಳ್ಳುತ್ತಿದ್ದಾನೆ. ರಿಚಿ ಅದನ್ನು ತೊಡಿಸಲು ಮುಂದಾಗುತ್ತಾನೆ.

ಆದರೆ ಬ್ರೂನೋ ತಾನೇ ಹಾಕಿಕೊಳ್ಳಲು ಹವಣಿಸುತ್ತಿದ್ದಾನೆ. ಹಿನ್ನೆಲೆಯಲ್ಲಿ ಸಣ್ಣ ಗುಂಪೊಂದು ನಿಂತು, ಕೆಳಗೆ ಮುಳುಗಿದವನನ್ನು ಉಪಚರಿಸುತ್ತಿರುವುದನ್ನು ನೋಡುತ್ತಿದೆ.

ಕ್ಷಯ–ವರ್ಧನ

ಟೈಬರ್ ನದಿಗೆ ಸಮಾನಾಂತರವಾಗಿ ಕಾಣುವ ಸಾಲು ಮರಗಳ ರಸ್ತೆಯ ಮಧ್ಯಚಿತ್ರ.

ಹಿನ್ನೆಲೆ ಸಂಗೀತ.

ಕೆಮೆರಾ, ನಡೆದು ಹೋಗುತ್ತಿರುವ ರಿಚಿ ಮತ್ತು ಬ್ರೂನೋರನ್ನು ಅನುಸರಿಸುತ್ತಿದೆ. ಬ್ರೂನೋ ಕಾಲೆಳೆಯುತ್ತಿದ್ದಾನೆ. ರಿಚಿ ಅದನ್ನು ಕಂಡು ನಿಲ್ಲುತ್ತಾನೆ.

ರಿಚಿ : ಸುಸ್ತಾಯ್ತಾ ?

ಬ್ರೂನೋ ಕೆಳಕ್ಕೆ ನೋಡುತ್ತ ಮೆಲುವಾಗಿ ತಲೆಯಾಡಿಸುತ್ತಾನೆ. ಅನಂತರ ಅಲ್ಲೇ ಬದಿಗಿರುವ ಕಲ್ಲು ಹಲಗೆಯತ್ತ ನೋಡುತ್ತಾನೆ.

ರಿಚಿ : ಕೂತ್ಕೋ ಅಲ್ಲಿ.... ಇನ್ನು ಮಾಡೋದೇನೋ ಇಲ್ಲ.... ....ಮನೆಗೆ ಹೋಗೋದು ಅಷ್ಟೆ.

ಬ್ರೂನೋ ಕಲ್ಲು ಹಲಗೆಯ ಮೇಲೆ ಕೂರುತ್ತಾನೆ. ರಿಚಿ ಪಕ್ಕದಲ್ಲೇ ಇರುವ ಪಾಗಾರಕ್ಕೆ ಒರಗಿ ನಿಲ್ಲುತ್ತಾನೆ.

ರಸ್ತೆಯಲ್ಲಿ ಹಾದು ಹೋಗುತ್ತಿರುವ ಒಂದು ಗುಂಪಿನ ಗದ್ದಲ. ಇಬ್ಬರೂ ಆಕಡೆ ನೋಡುತ್ತಾರೆ.

ಧ್ವನಿಗಳು : ಮಾಡೆನಾಗೆ — ಜಯವಾಗಲಿ.
ಮಾಡೆನಾಗೆ — ಜಯವಾಗಲಿ.

ರಸ್ತೆಯ ದೂರಚಿತ್ರ. ಒಂದು ಲಾರಿ ಹೋಗುತ್ತಿದೆ. ಕೆಮೆರಾ ಅದರ ಜೊತೆ ಲಾಳ ತಿರುಗುತ್ತಿದೆ. ಲಾರಿಯಲ್ಲಿ ಯುವಕರ ಗುಂಪೊಂದು ಖುಶಿಯಿಂದ ಹಾಡುತ್ತಿದೆ, ಕಿರುಚುತ್ತಿದೆ.

ಫೊರ್ಜಾ ಮಾಡೆನಾ ಎಂದು ದೊಡ್ಡ ಅಕ್ಷರದಲ್ಲಿ ಬರೆದ ಬಟ್ಟೆಯ ಬೋರ್ಡ್ ಕಟ್ಟಲಾಗಿದೆ. ಅನಂತರ ರಿಚಿಯ ಮಧ್ಯಸಮೀಪ ಚಿತ್ರ.

ರಿಚಿ : ಈ ಮಾಡೆನಾ ಒಳ್ಳೇ ಟೀಮಾ ?

ಮಧ್ಯ ಸಮೀಪ ಚಿತ್ರದಲ್ಲಿ ಬ್ರೂನೋ. ಆತನ ಬೇಸರ ಈಗ ಕಡಿಮೆಯಾಗಿದ್ದರೂ ಆತ ಸೆಟೆದುಕೊಂಡೇ ಇದ್ದಾನೆ. ತಲೆಯಾಡಿಸುತ್ತಾನೆ.

ರಿಚಿ : ಹಸಿವಾಗ್ತಿದೆಯಾ ?

ರಿಚಿಯ ದೃಷ್ಟಿಯಿಂದ ಕಾಣುವ ಬ್ರೂನೋ. ಆತ ತಂದೆಯ ಕಡೆ ತೀಕ್ಷ್ಣವಾಗಿ

ನೋಡಿ ಬಿರುಸಾಗಿ ತಲೆಯಲ್ಲಾಡಿಸುತ್ತಾನೆ. ಹಿನ್ನೆಲೆಯಲ್ಲಿ ಪ್ರೇಮಿಗಳೆಂದು ಗೊತ್ತಾಗುವಂತಿರುವ ಒಂದು ಯುವಕ ಜೋಡಿ ಭಾನುವಾರದ ವಿಹಾರಕ್ಕೆ ಹೊರಟಿದೆ. ಮತ್ತೊಬ್ಬ ಯೂನಿಫಾರಂ ಧರಿಸಿದ ಕಾರ್ಮಿಕ. ರಿಚಿಯ ಹಿಂದಿನ ರೂಪವನ್ನು ಹೋಲುತ್ತದೆ ಆತನ ವೇಷ ಭೂಷಣ. ರಿಚಿ ಪರ್ಸ್ ತೆಗೆದು ದುಡ್ಡು ಲೆಕ್ಕ ಮಾಡ್ತು ತ್ತಾನೆ. ಬ್ರೂನೋ ತಂದೆಯ ಕೈಯನ್ನೇ ನೋಡುತ್ತಿದ್ದಾನೆ. ಮತ್ತೆ ರಿಚಿಯ ಮಧ್ಯ ಸಮೀಪ ಚಿತ್ರ.

ರಿಚಿ : ತಿಂಡಿ ತಿನ್ನಬಹುದು ಅಲ್ವಾ ?

ಬ್ರೂನೋನ ಮುಖ ಬೆಳಗಿ ಒಪ್ಪಿಗೆ ಸೂಚಿಸುತ್ತದೆ. ಆತ ಹೊರಡಲು ತಯಾರಾಗಿ ಕಣ್ಣಿನಿಂದಲೇ ರಸ್ತೆಯ ಆಚೆ ಪಕ್ಕ ತೋರಿಸುತ್ತಾನೆ.

ರಿಚಿ : ಬಾ ಹಾಗಾದರೆ. ಅಲ್ಲಿ ಸಿಗುತ್ತೆ.

ದೂರಚಿತ್ರ. ಎತ್ತರ ಕೋನದಲ್ಲಿ ಬ್ರೂನೋ ಏಳುವುದು ರಿಚಿ ಅವನ ತೋಳು ಹಿಡಿದು ಹೊರಡುವುದು ಕಾಣುತ್ತದೆ.

ರಿಚಿ : ಹೀಗೆ ಇಲ್ಲೇ ನಿಂತಾಗ್ಲೂ ಏನೂ ಉಪಯೋಗ ?
ಹೋಗಿ ಬಿಡೋಣ.

ಅವರು ರಸ್ತೆಯನ್ನು ದಾಟುತ್ತಾರೆ.

ಒಂದು ಹೋಟಲು. ದೂರ ಚಿತ್ರದಲ್ಲಿ, ಕೆಮೆರಾ ಎದುರು ಬದಿಯಿಂದ ಒಳಭಾಗವನ್ನು ಕಾಣಿಸುತ್ತಿದೆ. ಬಾಗಿಲ ಹತ್ತಿರ ಒಂದು ಚಿಕ್ಕ ವೇದಿಕೆಯ ಮೇಲೆ ವಾದ್ಯಗೋಷ್ಠಿ, ವಯೋಲಿನ್. ಬಾಸ್ ಗಿಟಾರ್ ಮತ್ತು ಗಿಟಾರ್ ಜತೆ ಹಾಡುತ್ತಿರುವ ಒಬ್ಬ ಸಂಗೀತಗಾರ. ಮುಂದೆ ಕೂತ ಗಿರಾಕಿಗಳು. ರಿಚಿ ಮತ್ತು ಬ್ರೂನೋ ಪ್ರವೇಶಿಸುತ್ತಾರೆ. ಸುತ್ತಲಿನ ವೈಭವ ಕಂಡು ರಿಚಿ ಬೆರಗಾಗಿದ್ದಾನೆ. ಮತ್ತೆ ರಿಚಿಯ ನೋಟದ ನೆಲೆಯಿಂದ ಕಾಣುವ ದೂರಚಿತ್ರ. ಇಡಿ ರೂಂ ತುಂಬಿದೆ. ಟೇಬಲ್ಲಿನ ನಡುವೆ ವೇಟರ್‌ಗಳು ತಿರುಗಾಡುತ್ತಿದ್ದಾರೆ.

ಗದ್ದಲ ತುಂಬಿದೆ. ಅಲ್ಲಿನ ವಾಧ್ಯಗೋಷ್ಠಿಯ ಸಂಗೀತ.

ರಿಚಿ ಕೊಂಚ ಅಳುಕಿ ಬ್ರೂನೋನತ್ತ ನೋಡಿ ಮುನ್ನಡೆಯುತ್ತಾನೆ.

ರಿಚಿ : ಬ್ರೂನೋ, ಈ ಕಡೆ ಬಾ.

ಅವರಿಬ್ಬರೂ ಹಾಗೆಯೇ ನಡೆದು ಒಂದು ಖಾಲಿ ಮೇಜು ಹುಡುಕಿ ಎದುರು ಬದುರಾಗಿ ಕೂರುವುದನ್ನು ಕಾಣಿಸುವ ಕೆಮೆರಾ ಲಾಳ.

ರಿಚಿ : ಹೂಂ. ಅಲ್ಲೇ ಕೂತುಕೋ.

ರಿಚಿ ತನ್ನ ಹ್ಯಾಟ್ ತೆಗೆಯುತ್ತಾನೆ. ಬ್ರೂನೋ ಸ್ಕಾರ್ಫ್ ತೆಗೆಯುತ್ತಾನೆ. ವೇಟರ್

ಗಳು ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದ್ದಾರೆ. ಮಧ್ಯಸಮೀಪ ಚಿತ್ರದಲ್ಲಿ ಮತ್ತೆ ತಂದೆ ಮಗ ಕಾಣುತ್ತಾರೆ.

ರಿಚಿ : ಮತ್ಯಾಕೆ ಬೇಸರ ? ಇನ್ನು ಚೆನ್ನಾಗಿ ತಿನ್ನೋಣ.

ಬ್ರೂನೋನ ಸಮೀಪ ಚಿತ್ರ. ಮೌನವಾಗಿ ಹೆಮ್ಮೆ ತುಂಬಿ ಕೂತಿದ್ದಾನೆ. ಮತ್ತೆ ರಿಚಿಯ ಮಧ್ಯ ಸಮೀಪ ಚಿತ್ರ. ಆತ ವೇಟರ್‌ಗೆ ಸನ್ನೆ ಮಾಡುತ್ತಿದ್ದಾನೆ.

ರಿಚಿ : ವೇಟರ್....

ಹೋಟಲ್ ರೂಂನ ದೂರ ಚಿತ್ರ. ಒಬ್ಬ ವೇಟರ್ ತಿರುಗಿ ರಿಚಿಯನ್ನು ನೋಡು ತ್ತಾನೆ. ಆತ ಸ್ಪಷ್ಟವಾದ ತಾತ್ಸಾರದಿಂದ ತನ್ನ ಜೊತೆಯವನೊಬ್ಬನಿಗೆ ಹೋಗಲು ಸೂಚಿಸಿ ಅಲ್ಲೇ ಮತ್ತೇನೋ ಕೆಲಸದಲ್ಲಿ ತೊಡಗುತ್ತಾನೆ.

ವೇಟರ್ : ಅರಿಗೊ, ಆ ದೊಡ್ಡ ಮನುಷ್ಯರನ್ನ ಕೇಳು ಹೋಗು.

ಇನ್ನೊಬ್ಬ ವೇಟರ್ ಕೆಮೆರಾದತ್ತ ಬರುತ್ತಿದ್ದಾನೆ. ಕೆಮೆರಾ ಅವನೊಡನೆ ಹಿಂದಕ್ಕೆ ಸರಿದು ಲಾಳ ತಿರುಗಿ ರಿಚಿ ಮತ್ತು ಬ್ರೂನೋ ಟೇಬಲ್ಲಿಗೆ ತಾಗಿ ಕುಳಿತಿರುವುದನ್ನು ಕಾಣಿಸುತ್ತದೆ. ವೇಟರ್ ಈಗ ಕೆಮೆರಾಕ್ಕೆ ಬೆನ್ನಾಗಿ ಟೇಬಲ್ ಒರೆಸುತ್ತಿದ್ದಾನೆ.

ಅರಿಗೊ : ಅರ್ಧ ಬಾಟಲ್ ?

ರಿಚಿ : ಊಹೂಂ. ಇಡೀ ಬಾಟಲ್ ಮತ್ತು ಪೀಟ್ಸಾಗಳು.

ಅರಿಗೊ : (ತಾತ್ಸಾರ ಕಾಣಿಸುವಂತೆ) ಇಲ್ಲಿ ಪೀಟ್ಸಾ ಮಾಡೋದಿಲ್ಲ.

ಬ್ರೂನೋನ ಸಮೀಪ ಚಿತ್ರ.

ರಿಚಿ : ಏನು ? ಪೀಟ್ಸಾ ಮಾಡೋದಿಲ್ವಾ ?

ಅರಿಗೊ : (ಹೊರಗಿಂದ) ಇದು ರೆಸ್ಟೋರಾ ಗೊತ್ತಾಯ್ತಾ ?

ಮೂವರೂ ಕಾಣುವ ಚಿತ್ರಿಕೆ.

ರಿಚಿ : ಸರಿ, ಹಾಗಾದ್ರೆ ನಾವು ಊಟಾನೇ ಮಾಡ್ತೇವೆ.

ಅರಿಗೊ : ಊಟ ?

ರಿಚಿ : ಹೂಂ. ಏನಿದೆ ?

ಬ್ರೂನೋನ ಸಮೀಪ ಚಿತ್ರ. ಆತ ಪಕ್ಕದ ಟೇಬಲ್ಲಿನ ಕಡೆ ಆಶೆಯಿಂದ ನೋಡುತ್ತಿದ್ದಾನೆ.

ಅರಿಗೊ : (ಹೊರಗಿಂದ ತಾಳ್ಮೆಗೆಟ್ಟು) ಹೂಂ. ಏನುಬೇಕು ಹೇಳಿ.

ಬ್ರೂನೋನ ನೋಟದ ನೆಲೆಯಿಂದ ಕಾಣುವ ಪಕ್ಕದ ಮೇಜಿನ ದೃಶ್ಯ. ಒಂದು ಮಧ್ಯಮ ವರ್ಗದ ಕುಟುಂಬ ಭಾನುವಾರದ ವಿಹಾರಕ್ಕೆ ಅಲ್ಲಿಗೆ ಬಂದಿದೆ. ಅಲ್ಲಿ

ಬ್ರೂನೋನ ವಯಸ್ಸಿನವನೇ ಒಬ್ಬ ಹುಡುಗ ಇದ್ದಾನೆ. ಅವನು ಇತ್ತ ನೋಡುತ್ತಾನೆ. ಮತ್ತೆ ರಿಚಿಯ ಸಮೀಪ ಚಿತ್ರ. ಆತ ಪಕ್ಕದ ಟೇಬಲಿನತ್ತ ದೃಷ್ಟಿಹರಿಸಿದ್ದಾನೆ.

ರಿಚಿ : ಮೊಸಾರೆಲ್ಲಾ, ಕ್ಯಾರೋಸೋದಲ್ಲಿಟ್ಟಿರೋದು ಬೇಕಾ ?

ಬ್ರೂನೋ : (ಹರ್ಷೋತ್ಸಾಹದಿಂದ) ಹೂಂ. ಬೇಕು.

ರಿಚಿ : ವೇಟರ್, ಎರಡು ಮೊಸಾರೆಲ್ಲಾ ಮತ್ತು ಒಂದು ಬಾಟಲ್ ವೈನ್.... ಬೇಗ.

ವೇಟರ್ ಬಾಗಿ ಅಲ್ಲಿಂದ ನಡೆಯುತ್ತಾನೆ. ರಿಚಿ ಮಗನ ಕಡೆ ಬಾಗುತ್ತಾನೆ.

ರಿಚಿ : ಈಗ ಇದು ತಿನ್ನೋಣ. ಆಮೇಲೆ ನಿಂಗೆ ಕೇಕ್ ಕೊಡಿಸ್ತೀನಿ. ಆಯ್ತಾ ?

ಬ್ರೂನೋನ ಸಮೀಪ ಚಿತ್ರ. ಆತ ಹರ್ಷದಿಂದ ತಲೆಯಲ್ಲಾಡಿಸುತ್ತಾನೆ. ಆತನ ಕಣ್ಣುಗಳು ಮಿನುಗುತ್ತಿವೆ. ಅನಂತರ ಮತ್ತೆ ಬ್ರೂನೋನ ದೃಷ್ಟಿ ಪಕ್ಕದ ಟೇಬಲ್ಲಿನತ್ತ ಹೊರಳುತ್ತದೆ. ಪಕ್ಕದ ಟೇಬಲ್ಲಿನ ಹುಡುಗ ಜಂಬದಿಂದ ಬೇರೆಕಡೆ ನೋಡುತ್ತಾನೆ. ನಂತರ ಪ್ರೀತಿ ಮೆಚ್ಚುಗೆಗಳಿಂದ ತಂದೆಯತ್ತ ನೋಡುತ್ತಿರುವ ಬ್ರೂನೋ. ಮಧ್ಯಸಮೀಪ ಚಿತ್ರದಲ್ಲಿ ರಿಚಿ. ಸಂತೋಷದಿಂದ ಆತ ಹಿಂದಕ್ಕೊರಗಿದ್ದಾನೆ. ವಾದ್ಯಗೋಷ್ಠಿಯ ತಾಳ ಅನುಸರಿಸಿ ಬೆರಳುಗಳಿಂದ ಮೇಜಿನಮೇಲೆ ಬಾರಿಸತೊಡಗಿದ್ದಾನೆ. ಮತ್ತೆ ಮುಗುಳುನಗುತ್ತಿರುವ ಬ್ರೂನೋ, ವೇಟರ್ ಬಂದು ಮೇಜಿನ ಮೇಲೆ ಬಟ್ಟೆ ಹಾಸಿ ಎರಡು ಗ್ಲಾಸ್ ಮತ್ತು ಒಂದು ಸೀಸೆ ವೈನ್ ಇಡುತ್ತಾನೆ. ಒಂದು ಕ್ಷಣ ಬಿಟ್ಟು ರಿಚಿ ವೈನ್ ಬಾಟಲ್ ತೆಗೆದು ಅದನ್ನು ಎರಡು ಗ್ಲಾಸ್‌ಗಳಿಗೆ ತುಂಬುತ್ತಾನೆ. ಬ್ರೂನೋ ಆಶ್ಚರ್ಯದಿಂದ ವೈನ್ ತುಂಬಿದ ತನ್ನ ಗ್ಲಾಸ್ ನೋಡುತ್ತಿದ್ದಾನೆ. ರಿಚಿ ಒಂದೇ ಉಸಿರಿಗೆ ಗ್ಲಾಸ್ ಖಾಲಿ ಮಾಡಿ ನಿಟ್ಟುಸಿರು ಬಿಟ್ಟು ಮಗನ ಕಡೆ ನೋಡುತ್ತಾನೆ.

ರಿಚಿ : ಕುಡಿಯೋದಿಲ್ವಾ. ?

ಬ್ರೂನೋನ ಸಮೀಪ ಚಿತ್ರ. ಆತ ಅಸ್ತವ್ಯಸ್ತವಾಗಿ ಎರಡು ಗುಟುಕು ಕುಡಿಯುತ್ತಾನೆ. ರಿಚಿ ನಗುತ್ತಾನೆ.

ರಿಚಿ : ನಿನ್ನ ಕುಡಿಯೋಕೆ ಬಿಟ್ಟೆ ಅಂತ ಅಮ್ಮನಿಗೆ ಏನಾದ್ರೂ ಗೊತ್ತಾದ್ರೆ !

ಬ್ರೂನೋನ ಸಮೀಪ ಚಿತ್ರ. ಆತ ತನ್ನ ಗ್ಲಾಸನ್ನು ಕೆಳಗಿಟ್ಟು ಮುಗುಳು ನಗುತ್ತಿದ್ದಾನೆ.

ರಿಚಿ : ಯೋಚ್ನೆ ಮಾಡಬೇಡ. ಕುಡಿ.

ರಿಚಿ ವಾದ್ಯ ಮೇಳದತ್ತ ತಿರುಗುತ್ತಾನೆ. ಕೆಮೆರಾ ಹಾಡುವವನ ಬಳಿ ಚಲಿಸುತ್ತದೆ. ಹಾಡಿನ ಒಂದೊಂದು ಸಂಗತಿಗೂ ಹಾಡುಗಾರನ ಮುಖಭಾವ ಬದಲಾಗುತ್ತ ಹೋಗುತ್ತದೆ. ಅದಾದ ಮೇಲೆ ಒಂದು ಅನಂತರ ಇನ್ನೊಂದರಂತೆ — ಬ್ರೂನೋ ನಗುತ್ತಿರುವುದು, ರಿಚಿ ಮೆಲು ನಗುತ್ತಿರುವುದು, ಹಾಡುಗಾರ ಹಾಡುತ್ತಿರುವುದು ಮತ್ತು ಅವನ ಸಂಗಡಿಗರು ಭಲೇ ಭಲೇ ಎಂದು ಉತ್ತೇಜಿಸುತ್ತಿರುವುದು ಕಾಣಿಸುತ್ತ ಹೋಗುತ್ತದೆ. ಮತ್ತೆ ಅದೇ ರೂಂನ ದೂರಚಿತ್ರ. ವೇಟರ್ ಒಂದು ತಟ್ಟೆಯನ್ನು ಹಿಡಿದುಕೊಂಡು ಬಂದು ರಿಚಿ ಮತ್ತು ಬ್ರೂನೋರ ಟೇಬಲ್ ಮೇಲಿಟ್ಟು ಹೋಗುತ್ತಾನೆ.

ಸಂಗೀತ ತೀವ್ರಗೊಳ್ಳುತ್ತದೆ.

ಬ್ರೂನೋ ಹರ್ಷದಿಂದ ತನ್ನ ಪ್ಲೇಟ್ ನೋಡಿಕೊಳ್ಳುತ್ತಾನೆ. ಚಾಕುಫೋರ್ಕ್ ತೆಗೆದುಕೊಂಡು ಬಹು ಕಷ್ಟದಿಂದ ತನ್ನ ತಿಂಡಿಯನ್ನು ಕತ್ತರಿಸತೊಡಗುತ್ತಾನೆ. ರಿಚಿ ಸಲೀಸಾಗಿ ತಿನ್ನುತ್ತಿದ್ದಾನೆ.

ರಿಚಿ : ಹೂಂ. ತಿನ್ನು.

ಬ್ರೂನೋ ಇನ್ನೂ ತೊಂದರೆಪಡುತ್ತಲೇ ಇದ್ದಾನೆ. ರಿಚಿ ತಿನ್ನತೊಡಗಿದ್ದಾನೆ.

ರಿಚಿ : ಎಲ್ಲಾ ತನ್ನಷ್ಟಕ್ಕೆ ಸರಿಹೋಗ್ತಾ ಹೋಗತ್ತೆ, ಸಾವು ಒಂದನ್ನು ಬಿಟ್ಟರೆ.

ಬ್ರೂನೋ ಎದೆಗುಂದಿದವನಂತೆ ಚಾಕು ಮತ್ತು ಫೋರ್ಕನ್ನು ಕೆಳಗೆ ಬೀಳಿಸುತ್ತಾನೆ. ಮತ್ತು ತನ್ನ ಬೆರಳುಗಳಿಂದ ತಿನ್ನತೊಡಗಿದ್ದಾನೆ. ಚೀಸ್ ಎಳೆಗಳನ್ನು ಕೈಯಿಂದ ಬಾಯಿಗೆ ಹಾಯಿಸಿಕೊಂಡು ಅವುಗಳನ್ನು ಆಡಿಸುತ್ತ ಮೋಜು ಗೊಳ್ಳುತ್ತಾನೆ. ಪಕ್ಕದ ಹುಡುಗನತ್ತ ನೋಡುತ್ತಾನೆ. ಆತ ಭಾರೀ ಗಾಂಭೀರ್ಯದಿಂದ ತಿನ್ನುತ್ತಿದ್ದಾನೆ. ಮತ್ತೆ ಉತ್ಸಾಹದಿಂದ ಮತ್ತೊಂದು ಗ್ಲಾಸ್ ವೈನ್ ಬಗ್ಗಿಸಿಕೊಳ್ಳುತ್ತಿರುವ ರಿಚಿ. ಆಮೇಲೆ ರಿಚಿಯ ನೋಟದ ನೆಲೆಯಿಂದ ಕಾಣುವಂತೆ ಪಕ್ಕದ ಮೇಜು. ಅಲ್ಲಿ ಒಬ್ಬ ವೇಟರ್ ಕೇಕ್ ಮತ್ತು ಒಂದು ಬಾಟಲ್ ಶಾಂಪೆನ್‌ನ್ನು ತಂದಿಡುತ್ತಾನೆ. ಮತ್ತೆ ಮಧ್ಯ ಚಿತ್ರದಲ್ಲಿ ಬ್ರೂನೋ. ಆತನೂ ಪಕ್ಕದ ಮೇಜು ನೋಡುತ್ತಿದ್ದಾನೆ. ಅಲ್ಲಿ ತಂದಿಟ್ಟಿರುವ ಬಗೆಬಗೆಯ ತಿಂಡಿಗಳನ್ನು ನೋಡಿ ಬೆರಗಾಗಿದ್ದಾನೆ. ಅತ್ತ ಆ ಹುಡುಗ ಬ್ರೂನೋನನ್ನು ಅಣಕಿಸುತ್ತ ಕೇಕ್ ತಿನ್ನುತ್ತಿದ್ದಾನೆ. ಮತ್ತೆ ಸಮೀಪ ಚಿತ್ರದಲ್ಲಿ ರಿಚಿ. ಆತ ಗಂಭೀರನಾಗಿದ್ದಾನೆ.

ರಿಚಿ : ಹಾಗೆ ಊಟ ಮಾಡಬೇಕು ಅಂದ್ರೆ ಎಷ್ಟು ದುಡೀಬೇಕು ಗೊತ್ತಾ ?

ಬ್ರೂನೋನ ಸಮೀಪ ಚಿತ್ರ.

ರಿಚಿ : ಅರ್ಥವೇ ಆಗೋದಿಲ್ಲ....ತಿಂಗಳಿಗೆ ಒಂದು ಹತ್ತು ಲಕ್ಷವೇ ಬೇಕಾದೀತು....

ಆ ಸಂಖ್ಯೆ ಕೇಳಿ ಬ್ರೂನೋ ಬಾಯಲ್ಲಿದ್ದ ತುತ್ತು ಫಕ್ಕನೆ ಕೆಳಗೆ ಬೀಳುತ್ತದೆ. ಭಯದಿಂದ ತಂದೆಯನ್ನು ದಿಟ್ಟಿಸುತ್ತಿದ್ದಾನೆ. ರಿಚಿ ಮಗನ ಪ್ರತಿಕ್ರಿಯೆ ಗಮನಿಸುತ್ತಿದ್ದಾನೆ.

ರಿಚಿ : ತಗೊ.... ತಗೊ.... ತಿನ್ನು. ಅದನ್ನೆಲ್ಲ ಯೋಚನೆ ಮಾಡಬೇಡ.

ಬ್ರೂನೋ ತಿನ್ನಲು ತೊಡಗುತ್ತಾನೆ.

ರಿಚಿ : (ಹೊರಗಿಂದ) ಚೆನ್ನಾಗಿದ್ಯಾ ?

ಬ್ರೂನೋ ತಲೆಯಾಡಿಸುತ್ತಾನೆ. ರಿಚಿ ತಿನ್ನುವುದನ್ನು ನಿಲ್ಲಿಸಿ ಪರವಶವಾದವನಂತೆ ತಟ್ಟೆಯನ್ನು ಬದಿಗೆ ತಳ್ಳುತ್ತಾನೆ.

ರಿಚಿ : ಹಾಗೆ ಯೋಚನೆ ಮಾಡೋದಾದ್ರೆ ಎಲ್ಲ ಸರಿಹೋಗ ತಿತ್ತು.... ನಾವು ಸ್ವಲ್ಪ ಹೆಚ್ಚು ದುಡೀಬಹುದಿತ್ತು.

ಆತ ಒಂದು ಪೆನ್ಸಿಲ್ ಎತ್ತಿಕೊಂಡು ಪಕ್ಕದಲ್ಲಿರುವ ಕಾಗದದ ಮೇಲೆ ಬರೆಯ ತೊಡಗುತ್ತಾನೆ.

ರಿಚಿ : ನೋಡು, ಹೂಂ. ಪ್ರಾರಂಭಕ್ಕೆ ೧೨೦೦೦ ಲೈರ್.... ಮತ್ತೆ.... (ಕಾಗದ ಪೆನ್ಸಿಲ್ ಬ್ರೂನೋಗೆ ಕೊಡುತ್ತ) ಹೂಂ. ತಗೊ.

ಬ್ರೂನೋನ ಸಮೀಪ ಚಿತ್ರ. ಆತ ಪೇಪರ್ ಪೆನ್ಸಿಲ್ ತೆಗೆದುಕೊಂಡು ಬರೆಯ ತೊಡಗುತ್ತಾನೆ. ಜೊತೆಗೆ, ಆತ ಎಡಗೈಯಲ್ಲಿ ಚೀಸ್ ಹಿಡಿದುಕೊಂಡು ತಿನ್ನುತ್ತಲೇ ಇದ್ದಾನೆ.

ರಿಚಿ : (ಹೊರಗಿಂದ) ಮೊದಲಿಗೆ ೧೨೦೦೦........ ಮತ್ತೆ ೨೦೦೦೦ ಓವರ್ ಟೈಂ, ಮತ್ತೆ ಕುಟುಂಬ ಭತ್ಯೆ ದಿನಕ್ಕೆ ೮೦೦···· ಹೂಂ. ೮೦೦x೩೦ .... ಎಷ್ಟಾಯಿತು ?

ಬ್ರೂನೋ ಲೆಕ್ಕಹಾಕಿ ಮೊತ್ತವನ್ನು ರಿಚಿಗೆ ತೋರಿಸುತ್ತಾನೆ. ರಿಚಿ ಅದನ್ನು ಓದುತ್ತಾನೆ.

ರಿಚಿ : ಇನ್ನೇನು ಹೆಚ್ಚಿಗೆ ಬೇಕು ನಮಗೆ ? ಹಿಂದೆ ಯಾವಾಗ್ಲೂ ಅಷ್ಟು ದುಡೀಲಿಲ್ಲ..... ಹೂಂ ಇವತ್ತು ಈ ದುಡಿಮೇನೇ ಹೋಗ್ತಿದೆಯಲ್ಲ ಊಹೂಂ.... ಇಲ್ಲ.... ಬಿಡಬಾರದು.... ನಾನು ಬಿಡಲ್ಲ. ಆ ಸೈಕಲ್ ಹುಡುಕಲೇ ಬೇಕು. ಅದಿಲ್ಲದೆ ನಾವು ಊಟ ಮಾಡೋಕೂ ಆಗಲ್ಲ.

ಬ್ರೂನೋ : ನಾವು ದಿನಾ ಪೋರ್ಟ್‌ಪೋರ್ಟೆಗೆ ಹೋಗ್ತಿರಬೇಕಾಗುತ್ತೆ. ಆ ಜನಾನ ನಾವು ಹಿಡೀಬೇಕಲ್ಲ.

ರಿಚಿ : ಹೌದು. ಆದರೆ ಇನ್ನೊಂದು ಅವರು ಅಲ್ಲಿ ಕಾಣಿಸ್ಕೋಳ್ಳೋದಿಲ್ಲ. ಸದ್ಯಕ್ಕಂತೂ ಇಲ್ಲ. ಊಹೂಂ. ಹುಡುಕೋಕೆ ಆಗಲ್ಲ. ಅಮ್ಮ ಮೊಂಬತ್ತಿ ಉರಿಸಿದರೂ ಆಗಲ್ಲ. ಯಾವ ಸಾಧು ಆಶೀರ್ವಾದ ಮಾಡಿದ್ರೂ ಆಗಲ್ಲ. ಊಹೂಂ ಆಗಲ್ಲ.

ಫಕ್ಕನೆ ರಿಚಿಯ ಮನಸ್ಸಿಗೆ ಏನೋ ಹೊಳೆಯುತ್ತದೆ.

ಸಂಗೀತ ಬದಲಾಗುತ್ತದೆ.

ಕೆಮೆರಾ ನಿಧಾಗವಾಗಿ ಅವರನ್ನೇ ಕೇಂದ್ರೀಕರಿಸಿ, ಸಮೀಪಿಸುತ್ತದೆ.

ಕ್ಷಯ–ವರ್ಧನ.

# ಭಾಗ ಮೂರು

ಬಿಸಿಲು ಚೆಲ್ಲಿರುವ ಚಿಕ್ಕ ರಸ್ತೆಯೊಂದರಲ್ಲಿ ರಿಚಿ ಮತ್ತು ಬ್ರೂನೋ ನಡೆಯುತ್ತಿದ್ದಾರೆ. ಕೆಮೆರಾ ಅವರನ್ನು ಅನುಸರಿಸುತ್ತದೆ. ಅವರು ಪೇವ್‌ಮೆಂಟ್‌ನತ್ತ ನಡೆಯುತ್ತಿದ್ದಂತೆ ಅವರ ನಡಗೆಯ ವೇಗ ಹೆಚ್ಚುತ್ತಿದೆ. ಒಂದು ಕಟ್ಟದ ಎದುರು ರಿಚಿ ನಿಲ್ಲುತ್ತಾನೆ. ಅದು ಸೆಸೋರಾ ಸಂತೋನಾಳ ಮನೆ. ರಿಚಿ ಮತ್ತು ಬ್ರೂನೋ ಮೆಟ್ಟಲುಗಳನ್ನು ಏರುತ್ತಾರೆ. ಅವರು ಭವಿಷ್ಯಕಾರ್ತಿಯ ಬಾಗಿಲಿಗೆ ತಲಪುವ ವರೆಗೂ ಹಿನ್ನೆಲೆಯಲ್ಲಿ ರೇಡಿಯೋ ಪ್ರಕಟನೆಗಳು ಕೇಳಿಬರುತ್ತಿವೆ.

ರೇಡಿಯೋ : ಈಗ ಕ್ರೀಡಾವಾರ್ತೆಗಳು. ಇಂದು ರಾಜ್ಯದ ಅನೇಕ ಕಡೆ ಅನೇಕಾನೇಕ ಮ್ಯಾಚ್‌ಗಳು ನಡೆಯುತ್ತಿವೆ. ಅವುಗಳಲ್ಲಿ ಮುಖ್ಯವಾದವೆಂದರೆ....

ಕೆಮೆರಾ ಕೋನದಿಂದ ರಿಚಿ ಮತ್ತು ಬ್ರೂನೋ ಸಂತೋನಾಳ ಬಾಗಿಲು ತಲುಪುತ್ತಿರುವುದನ್ನು ತೋರಿಸುತ್ತದೆ.

ರೇಡಿಯೋ : ....ಫ್ಲಾರೆನ್ಸಿನಲ್ಲಿ ಲೇಜಿಯೋ ವಿರುದ್ಧ ಫೆಯೋರೆಂಟೀನಾ, ರೋಂ ವಿರುದ್ಧ ಮೊಡೆನಾ....

ಸಂತೋನಾಳ ರೂಮಿನತ್ತ ಕಾರಿಡಾರಿನಲ್ಲಿ ರಿಚಿ ಬ್ರೂನೋ ಹೋಗುತ್ತಿದ್ದಾರೆ. ಅದೇ ಅರೆತೆರೆದ ಬಾಗಿಲಿನಿಂದ ಕಾಣುವ ಅದೇ ಹೆಂಗಸು ಅದೇ ಅಡುಗೆ ಕೆಲಸದಲ್ಲಿ ತೊಡಗಿದ್ದಾಳೆ.

ಹೆಂಗಸು : (ಈಕಡೆ ತಿರುಗದೆಯೇ) ಮುಂದೆ........ ಕಡೇ ಬಾಗಿಲು.

ಅವರಿಬ್ಬರೂ ನಡೆಯುತ್ತಿದ್ದಂತೆ ಪಾರ್ಶ್ವದಿಂದ ಕೆಮೆರಾ ಅನುಸರಿಸುತ್ತದೆ ಬಾಗಿಲು ಸಮಿಾಪಿಸುತ್ತಿದ್ದಂತೆ ರಿಚಿ ಹ್ಯಾಟ್ ತೆಗೆಯುತ್ತಾನೆ. ಹಿಂದೆ ಕಾರಿಡಾರಿನಲ್ಲಿ ನಡೆದು ಬರುತ್ತಿರುವ ಒಬ್ಬ ವಯಸ್ಸಾದ ಹೆಂಗಸು, ಒಬ್ಬ ಯುವತಿ ಮತ್ತು ಕಂಕುಳು

ಜೊಣ್ಣೆಯ (ಕಾಲು ಊನವಾದ) ಇನ್ನೊಬ್ಬ ಹೆಂಗಸು ನಡೆದು ಬರುತ್ತಿದ್ದಾರೆ. ಆ ಮೂವರ ಮಧ್ಯ ಚಿತ್ರ.

ಮುದುಕಿ : ಏನು ಹೇಳ್ತಾಳೊ. ನನಗೆ ಭಯ.

ಮತ್ತೊಬ್ಬ ಹೆಂಗಸು : ಹೆದರ ಬಾರದು ಮಾರಿಯಾ, ಅವಳ ಹತ್ರ ಏನೂ ಮುಚ್ಚಿಡಬೇಡ. ಅವಳು ಗುಣ ಮಾಡ್ತಾಳೆ.

ಮುದುಕಿ : ದೇವರು ದೊಡ್ಡವ. ಅವನೇ ಕಾಪಾಡ ಬೇಕು.

ಅವರು ಭವಿಷ್ಯಕಾರ್ತಿಯ ಕೋಣೆಯೊಳಗೆ ಹೋಗುತ್ತಿದ್ದಂತೆ ಕೆಮೆರಾ ಲಾಳ. ಕೋಣೆಯ ದೂರಚಿತ್ರ. ಅಲ್ಲಿ ಗಿರಾಕಿಗಳು ತುಂಬಿಕೊಂಡಿದ್ದಾರೆ. ಸಂತೋನಾ ತನ್ನ ಡ್ರೆಸಿಂಗ್ ಗೌನ್ ತೊಟ್ಟು ಕೂತಿದ್ದಾಳೆ. ಕೈ ಎತ್ತಿದ್ದಾಳೆ.

ಸಹಾಯಕಿ : (ಗಿರಾಕಿಯನ್ನುದ್ದೇಶಿಸಿ ಕೈ ತೋರಿಸುತ್ತ) ಇದು ಹೌದು.... ಇದು ಅಲ್ಲ.

ಬಾಗಿಲಲ್ಲಿ ರಿಚಿ ಮತ್ತು ಬ್ರೂನೋ ನಿಂತಿರುವತ್ತ ಕೆಮೆರಾ ಚಲಿಸುತ್ತದೆ.

ಸಂತೋನಾ : ಮಗೂ ಬೀಜವನ್ನು ಬೇರೇಯೇ ಹೊಲದಲ್ಲಿ ಬಿತ್ತು.

ಅಡುಗೆ ಮನೆಯಿಂದ ಬಂದ ಹೆಂಗಸು ಟ್ರೇನಲ್ಲಿ ಟೀ ತಂದಿದ್ದಾಳೆ. ರಿಚಿಯನ್ನು ಹಾದು ನಡೆದು ಸಂತೋನಾಳ ಹಿಂದೆ ನಿಲ್ಲುತ್ತಿರುವಂತೆ ಕೆಮೆರಾ ಲಾಳ ತಿರುಗುತ್ತದೆ. ಸಂತೋನಾ ಹೊಳೆಹೊಳೆವ ವೇಷ ಧರಿಸಿದ ಮೂವತ್ತು ವರ್ಷದ ಗೃಹಸ್ಥನೊಬ್ಬನೊಡನೆ ಮಾತಾಡುತ್ತಿದ್ದಾಳೆ. ಅವನ ಹಿಂದೆ ಒಬ್ಬ ವಯಸ್ಸಾದ ಹೆಂಗಸು-ಪ್ರಾಯಶಃ ತಾಯಿ—ಇದ್ದಾಳೆ.

ಮನುಷ್ಯ : ನಿಮ್ಮ ಮಾತು ನನಗೆ ತಿಳೀಲಿಲ್ಲ.

ಸಂತೋನಾ : ಯಾಕೆ ? ಬಹಳ ಸುಲಭ. ಬಂಜರು ಭೂಮಿಯನ್ನು ಉಳುವುದರಲ್ಲಿ ಏನು ಅರ್ಥ ? ಅಲ್ಲಿ ಬಿತ್ತಬಹುದು, ಆದರೆ ಬೆಳೆ ಬರುವುದಿಲ್ಲ.

ಆ ಗೃಹಸ್ಥನ ಸಮೀಪ ಚಿತ್ರ. ಆತ ಆಘಾತಗೊಂಡಿದ್ದಾನೆ.

ಸಂತೋನಾ : ಈಗ ತಿಳಿಯಿತೆ ?

ಮನುಷ್ಯ : ಇಲ್ಲ. ಹೂಂ.

ಸಂತೋನಾ : ಆ ಹೆಂಗಸು ನಿನ್ನನ್ನು ಪ್ರೀತಿಸುವುದಿಲ್ಲ. ಆಕೆಯನ್ನು ಮರೆತು ಬಿಡು.

ಆತ ಗೊಂದಲಗೊಂಡಿದ್ದಾನೆ.

ಸಂತೋನಾ : ದಡ್ಡ ನೀನು. ಮಗೂ, ಪ್ರಪಂಚದಲ್ಲಿ ಬೇಕಷ್ಟು ಹೆಣ್ಣುಗಳಿವೆ. ನಿನ್ನ ಬೀಜ ಬೇರೆಕಡೆ ನೆಡು.

ಮತ್ತೆ ಆತನ ಮಧ್ಯ ಸಮೀಪ ಚಿತ್ರ. ಆತ ಒಪ್ಪಿದಂತೆ ತಲೆಯಾಡಿಸಿ ಹಣದ ಪರ್ಸ್ ತೆಗೆಯುತ್ತಿದ್ದಾನೆ. ಸಹಾಯಕಿ ಮುಂದೆ ಬಾಗಿ ಸಂತೋನಾಳಿಗೆ ಟೀ ಕೊಡುತ್ತಾಳೆ.

ಸಹಾಯಕಿ : ತಾಯಿ, ಆರಿಹೋಗ್ತಾ ಇದೆ.

ಸಂತೋನಾ : (ಆ ಮನುಷ್ಯನಿಗೆ) ಗುಡ್ ಬೈ.

ಆ ಮನುಷ್ಯ ಹಣದ ನೋಟನ್ನು ಇನ್ನೊಬ್ಬ ಸಹಾಯಕಿಗೆ ಕೊಟ್ಟು ಹೊರಡುತ್ತಾನೆ.

ಮನುಷ್ಯ : ಥ್ಯಾಂಕ್ಸ್. ಗುಡ್ ಬೈ.

ಆತ ತನ್ನ ತಾಯಿಯ ಜತೆ ಹೊರ ಹೋಗುತ್ತಿದ್ದಂತೆ ಬ್ರೂನೋ ಜಿಗಿದೆದ್ದು ತಂದೆಗೆ ಸನ್ನೆ ಮಾಡುತ್ತಾನೆ.

ಬ್ರೂನೋ ಪಪಾ. ಇಲ್ಲಿ ಜಾಗ ಇದೆ.

ಈಗಷ್ಟೇ ತೆರವಾದ ಕುರ್ಚಿಯೆದುರು ಬ್ರೂನೋ ನಿಂತಿದ್ದಾನೆ.

ಒಬ್ಬ ಗಿರಾಕಿ : ಏಯ್ ಹುಡುಗ, ಹಿಂದೆ ನಡಿ.

ಬ್ರೂನೋ ನಿಂತ ಕುರ್ಚಿಯತ್ತ ರಿಚಿ ಹೋಗುತ್ತಿರುವಂತೆ ಕೆಮೆರಾ ಲಾಳ. ಉಳಿದ ಗಿರಾಕಿಗಳು ತಕರಾರು ಮಾಡುತ್ತಿದ್ದಾರೆ.

ಒಬ್ಬ ಮುದುಕ : ಏ ಪೋರ, ಸರದಿ ಬರೋವರಿಗೆ ಸ್ವಲ್ಪ ಕಾಯಬೇಕು.

ಇನ್ನೊಬ್ಬ ಹೆಂಗಸು : ಸರದಿಗೆ ಕಾಯದಿದ್ರೆ ಆಗತ್ತಾ ? ನಿಯತ್ತು ಇರ ಬೇಕು. ನ್ಯಾಯಕ್ಕೆ ಗೌರವ ಬೇಕು. ಎರಡು ಗಂಟೆಯಿಂದ ಕೆಲವರು ಕಾಯ್ತಿದಾರೆ. ಉದಾಹರಣೆಗೆ ನಾನೇ........

ಒಬ್ಬ : ನಿನಗಿಂತ ಎಷ್ಟೋ ಮುಂಚೆ ನಾನು ಇಲ್ಲಿದ್ದೆ. ಪಪ.... ಪಪ.... ಅಂತ ಕರೀತಾ ಮುಂದೆ ನಡೆದರೆ ಬಿಟ್ಟು ಬಿಡ್ತಾರಾ ....ಏಯ್, ಬಾ ಹಿಂದೆ.

ರಿಚಿ : (ಕ್ಷುಬ್ಧನಾಗಿ) ನಂಗೆ ಸ್ವಲ್ಪ ಅರ್ಜೆಂಟ್ ಇದೆ.

ಇನ್ನೊಬ್ಬ : ನಂಗೂ ಅರ್ಜೆಂಟೇ ಇರೋದು.

ಹೆಂಗಸು : ನಿನಗಿಂತ ಒಂದು ಗಂಟೆ ಮುಂಚೆ ಬಂದಿದ್ದೆ.

ರಿಚಿ : ಆದ್ರೆ ನಾನು ನಿಜವಾಗ್ಲೂ ತುಂಬ ಅರ್ಜಂಟಲ್ಲಿದ್ದೇನೆ.

ಹೆಂಗಸು : ನಾವೆಲ್ಲ ಅರ್ಜಂಟಲ್ಲೇ ಇದ್ದೇವೆ.

ರಿಚಿ : ದಯವಿಟ್ಟು ನನ್ನ ಮೊದಲು ಹೋಗೋಕೆ ಬಿಡಿ.

ಇನ್ನೊಬ್ಬಾಕೆ : ಇದೊಳ್ಳೆ ಕಥೆ. ಯಾವಾಗ್ಲೂ ನನ್ನ ಮುಂಚೆ ಬಿಡಿ ಅಂತ ಒಬ್ರಲ್ಲ ಒಬ್ರು ಹೇಳ್ತಾನೇ ಇರ್ತಾರೆ.

ಸಂತೋನಾಳ ಮಧ್ಯ ಚಿತ್ರ. ನಿರಾಸಕ್ತಳಾಗಿ ಆಕೆ ಟೀ ಹೀರುತ್ತಿದ್ದಾಳೆ.

ಸಂತೋನಾ : ಸ್ನೇಹಿತರೇ. ಈಗ ಜಗಳ ಆಡಬಾರದು........
ಹುಂ, ಬನ್ನಿ

ದೂರಚಿತ್ರದಲ್ಲಿ ಮೇಲು ಕೂನದಿಂದ ಅವರು ವಾದಾಟ ಮಾಡಿಕೊಳ್ಳುತ್ತಾ ಅತ್ತಿತ್ತಾ ಚಲಿಸುವುದು ಗೊಂಬೆಗಳ ಚಲನೆಯಂತೆ ಕಾಣುತ್ತದೆ. ಸಂತೋನಾ ಕೈ ಮಡಚಿ ಕೊಳ್ಳುತ್ತಿದ್ದಾಳೆ.

ಸಂತೋನಾ : ಹುಂ ಹುಂ.... ನಿಮಗೆಲ್ಲ ಸರದಿ ಬಂದೇ ಬರುತ್ತದೆ.

ಆಕೆಯ ಸಹಾಯಕಿ ಸೂಚಿಸುತ್ತಿದ್ದಾಳೆ.

ಸಹಾಯಕಿ : ಇದುಹೌದು. (ರಿಚಿಯನ್ನು ಸೂಚಿಸಿ) ಇದು ಅಲ್ಲ

ಸಂತೋನಾ : (ಕೈಗಳನ್ನು ಆಕಾಶಕ್ಕೆತ್ತಿ) ಪ್ರಭು ನನಗೆ ಜ್ಯೋತಿಯನ್ನು ಕರುಣಿಸು.

ರಿಚಿಗೆ ಎದುರಾಗಿ ಕಾಣುದ ಸಂತೋನಾಳ ಮಧ್ಯ ಚಿತ್ರ.

ಸಂತೋನಾ : ಮಗೂ ನಿನಗೇನು ಬೇಕು ?

ರಿಚಿ : ಯಾರೋ ಕಳವು ಮಾಡಿ....

ಸಂತೋನಾ : ಏನು ಕದ್ದರು ?

ರಿಚಿ : ನನ್ನ ಬೈಸಿಕಲ್ ? ನಾನೀಗ ನಿನಗೇನು ಹೇಳಬೇಕು ಅಂತೀಯಾ ? ನನಗೆ ಅರ್ಥವಾಗುತ್ತಿಲ್ಲ. ನನಗೆ ಕಾಣುವುದಿಷ್ಟೇ ಕೇಳು–ಅಥವಾ ಅದು ನಿನಗೆ ಕೊಡಲೇ ಸಿಗುತ್ತದೆ ಇಲ್ಲ ಸೀಗೋದೇ ಇಲ್ಲ....ತಿಳಿತಾ ?

ರಿಚಿ : ಈ ಕೊಡ್ಲೇ ? ಅಂದ್ರೆ ನಾನು ಎಲ್ಲಿ ಹುಡುಕಲಿ ?

ಸಂತೋನಾ : ಮತ್ತೇನೂ ಹೆಚ್ಚು ಹೇಳಲಾರೆ. ಹೋಗು. ನನ್ನ ಮಾತನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸ್ಸು ಅಥವಾ ಅದು ನಿನಗೆ ಕೊಡಲೇ ಸಿಗುತ್ತದೆ, ಇಲ್ಲ ಸಿಗೋದೇ ಇಲ್ಲ.

ರಿಚಿ ಅತೃಪ್ತನಾಗಿ ಜೇಬಿಗೆ ಕೈ ಹಾಕುತ್ತಾನೆ. ಸಂತೋನಾ ತನ್ನ ಉಂಗುರಗಳನ್ನು ಪರಿಕ್ಷಿಸುತ್ತಿದ್ದಾಳೆ. ರಿಚಿ ಮತ್ತು ಬ್ರೂನೋ ಹಣದ ಪರ್ಸ್‌ನಲ್ಲಿ ಉಳಿದಿರುವುದನ್ನು ಗಮನಿಸುತ್ತಿದ್ದಾರೆ. ಬ್ರೂನೋ ಅದರಿಂದ ಚಿಕ್ಕ ಮೊತ್ತದ ನೋಟೊಂದನ್ನು ತೆಗೆದು ಸಂತೋನಾಗೆ ಕೊಡ ಹೊಗುತಾನೆ. ಆಕೆ ವೈರಾಗ್ಯದಿಂದೆನ್ನುವಂತೆ ಕಣ್ಣು ಮುಚಿ ತಾಳೆ. ಸಹಾಯಕಿ ಬ್ರೂನೋನಿಂದ ಹಣ ಪಡೆಯುತ್ತಾಳೆ.

ರಿಚಿ : (ಹೊರಡುತ್ತ, ನಿರ್ಭಾವವಾಗಿ) ಥ್ಯಾಂಕ್ಸ್, ಗುಡ್ ಬೈ

ಸಂತೋನಾ : ಗುಡ್ ಬೈ

ತಂದೆ ಮಗ ಕೋಣೆಯಿಂದ ಹೊರಡುವುದನ್ನು ತೋರಿಸುವ ಲಾಳ. ಅವರು ಬಾಗಿಲಿಂದ ಹೊರ ಹೊರಡುತ್ತಾರೆ.

ಸಂತೋನಾ : (ಹೊರಗಿಂದ) ಅಡೇಲೆ, ಇವತ್ತು ಏನು ನಿಂದು ?

ಅಡೇಲೆ : (ಹೊಗಿಂದ) ನನ್ನ ಗಂಡ ಪ್ರತಿದಿನ ಕುಡುಕೊಂಡು ಬರ್‍ತಾನೆ.

ಸಂತೋನಾ : (ಹೊರಗಿಂದ) ಪಾಪ, ನಿಂಗೆ ಎಂಥಾ ಕಷ್ಟ. ಅವರಿಗೆ ಹಣಕೊಡಬೇಡ.

ಅಡೇಲೆ : (ಹೊರಗಿಂದ) ನಾನೇನು ಮಾಡಲಿ. ಅವನು ತಗೊಂಡು ಬಿಡ್ತಾನೆ.

ರಿಚಿ ಮತ್ತು ಬ್ರೂನೋ ಮೆಲ್ಲಗೆ ಮೆಟ್ಟಿಲುಗಳನ್ನಿಳಿದು ಕಟ್ಟಡದ ಹೊರಗೆ ನಡೆಯುತ್ತಾರೆ. ರಿಚಿ ತನ್ನ ಹ್ಯಾಟ್ ಹಾಕಿಕೊಳ್ಳುತ್ತಾನೆ.

ಚರ್ಚಿನ ಗಂಟೆಗಳು ಬಾರಿಸುವ ಶಬ್ದ–ಹಿನ್ನೆಲೆಯಲ್ಲಿ.

ಮಧ್ಯ ಚಿತ್ರದಲ್ಲಿ ರಿಚಿ ಮತ್ತು ಬ್ರೂನೋ ಚರ್ಚಿನ ಗಂಟೆಯ ಶಬ್ದ ಕೇಳಿದರು. ಒಂದು ಕ್ಷಣ ನಿಲ್ಲುತ್ತಾರೆ. ಬಹುಶಃ ಪ್ರಾರ್ಥನೆಯ ಗಂಟೆ ಅದು. ಮತ್ತೆ ನಿಧಾನವಾಗಿ ಅವರು ಹೊರಡುತ್ತಾರೆ; ಮುನ್ನಡೆಯುತ್ತಾರೆ.

ಇನ್ನೊಂದು ರಸ್ತೆ ಕೆಳಕೋನದಿಂದ ರಿಚಿ ಮಧ್ಯ ಸಮೀಪ ಚಿತ್ರ. ನಡೆಯುತ್ತಿರುವ ತಂದೆ–ಮಗ ಫಕ್ಕನೆ ನಿಲ್ಲುತ್ತಾರೆ. ಚೌಕಟ್ಟಿನ ಆಚೆಗಿನ ಏನನ್ನೋ ದಿಟ್ಟಿಸಿ ನೋಡುತ್ತಾರೆ. ಮಧ್ಯ ಸಮೀಪ ಚಿತ್ರದಲ್ಲಿ ಬ್ರೂನೋ. ಆತ ಚೌಕಟ್ಟಿನ ಹೊರಗೊಮ್ಮೆ ತಂದೆಯ ಕಡೆಗೊಮ್ಮೆ ನೋಡುತ್ತಾನೆ. ಆಮೇಲೆ ರಸ್ತೆಯ ಆಚೆ ಬದಿ ಇವರು ಕಣ್ಣು ಕೀಲಿಸಿ ನೋಡುತ್ತಿರುವ ದೃಶ್ಯ : ಕಳ್ಳ ಕಾಣಿಸಿಕೊಂಡಿದ್ದಾನೆ. ಆತ ಇತ್ತ ತಿರುಗುತ್ತಾನೆ. ಫಕ್ಕನೆ ಅವನಿಗೆ ಇವರ ಗುರುತು ಹತ್ತುತ್ತದೆ. ರಿಚಿಯ ಅಡಿ ಸಮೀಪ ಚಿತ್ರ-ದಿಟ್ಟಿಸಿ ನೋಡುತ್ತಿದ್ದಾನೆ. ಪುನಃ ಅತಿ ಸಮೀಪ ಚಿತ್ರ-ಕಳ್ಳ ಇತ್ತ ನೋಡುತ್ತಿದ್ದಾನೆ.

ಚರ್ಚಿನ ಗಂಟೆಗಳು ಹೊಡದು ಕೊಳ್ಳುವುದು ಮುಂದುವರೆದಿದೆ.

ರಸ್ತೆಯ ದೂರ ಚಿತ್ರ. ಕಳ್ಳನ ಹಿಂದಿರುವ ರಿಚಿ ಮತ್ತು ಬ್ರೂನೋ. ಆತ ಇವರ ಎದುರಿಗೆ ಇತ್ತ ಗಮನಿಸದವನಂತೆ ಜೋರಾಗಿ ನಡೆಯುತ್ತಿದ್ದಾನೆ. ರಿಚಿ ಬ್ರೂನೋ ಹಿಂಬಾಲಿಸುತ್ತಿದ್ದಾರೆ. ತಟ್ಟನೆ ಒಂದು ಕತ್ತರಿ ರಸ್ತೆಯಲ್ಲಿ ಕಳ್ಳ ಬದಿಗೆ ತಿರುಗಿ

ಓಡತೊಡಗುತ್ತಾನೆ. ರಿಚಿ ಮತ್ತು ಬ್ರೂನೋ ಬೆನ್ನಟ್ಟಿ ಓಡುತ್ತಾರೆ. ಮತ್ತೊಂದು ರಸ್ತೆ. ಕಳ್ಳ ಒಂದು ಕಟ್ಟಡದ ಕಮಾನಿನತ್ತ ಓಡುವುದನ್ನು ಕೆಮೆರಾ ಎದುರಿಂದ ಗ್ರಹಿಸುತ್ತದೆ. ಹಿಂದೆ ರಿಚಿ ಬ್ರೂನೋ ಅನುಸರಿಸುತ್ತಿದ್ದಾರೆ.

ಚರ್ಚ್ ಗಂಟೆಗಳು ಬಾರಿಸುವುದು ನಿಲ್ಲುತ್ತದೆ.

ಆ ಕಟ್ಟಡದ ಎದುರು. ಹೊಸ ಮಾದರಿಯ ಗಾಜು ಕಿಂಡಿಯ ಕಬ್ಬಿಣದ ಬಾಗಿಲು. ಬದಿಗೆ 'ವಯಸ್ಕರಲ್ಲದವರಿಗೆ ಪ್ರವೇಶವಿಲ್ಲ' ಎಂಬ ಫಲಕ ತೂಗಾಡುತ್ತಿದೆ. ಅದು ಒಂದು ಅಧಿಕೃತ ಪರವಾನಗಿ ಪಡೆದ ವೇಶ್ಯಾಗೃಹ. ರಿಚಿ ಬಾಗಿಲು ಬಡಿಯುತ್ತಿದ್ದಾನೆ ಅವನ ಸಹನೆ ಮೀರಿದೆ. ಬಾಗಿಲ ಹಿಂದೆ ಒಬ್ಬ ಹೆಂಗಸು ಬಂದಿದ್ದು ಗಾಜಿನಲ್ಲಿ ನೆರಳಾಗಿ ಕಾಣುತ್ತದೆ.

ಹೆಂಗಸು : (ಹೊರಗಿಂದ) ಮುಚ್ಚಿದೆ ಈಗ. (ಆತ ಮತ್ತೆ ತಟ್ಟುತ್ತಾನೆ) ಹುಡುಗೀರು ಊಟಾ ಮಾಡ್ತಾ ಇದಾರೆ. (ಆತ ಮತ್ತೂ ಗಟ್ಟಿಯಾಗಿ ತಟ್ಟುತ್ತಾನೆ, ಹೆಂಗಸು ಅರ್ಧ ಬಾಗಿಲು ತಟ್ಟುತ್ತಾಳೆ) ನಾವು ಬಾಗಿಲು ಹಾಕಿದ್ರೆ ಎಲ್ಲರಿಗೂ ಮುಚ್ಚಿದೆ ಅಂತ ಅರ್ಥ ತಿಳೀತಾ ?

ಹೆಂಗಸು ಬಾಗಿಲು ಹಾಕಲು ಪ್ರಯತ್ನಿಸುತ್ತಾಳೆ. ರಿಚಿ ಆಕೆಯನ್ನೂ ದಬ್ಬಿ ಬಾಗಿಲು ತೆರೆಯುತ್ತಾಳೆ. ಒಳನುಗ್ಗುತ್ತಾನೆ. ಬ್ರೂನೋನೂ ಅವನ ಹಿಂದೆ ನುಗ್ಗಲು ಯತ್ನಿಸುತ್ತಾನೆ.

ಹೆಂಗಸು : ಅಯ್ಯಯ್ಯೊ....ಇದನ್ನು ನೋಡು.... ಈ ಮಗು ! ....ನೀನು ಬರ್‍ತೀಯಾ ಇಲ್ಲಿ ? ....ನಡಿ ........ಹೊರಡು ಹೊರಡು.

ಅವನನ್ನು ಹೊರಗೆ ಒತ್ತಿ ಬಾಗಿಲು ಹಾಕುತ್ತಾಳೆ. ಅತ ಗೊಂದಲಗೊಂಡು ಹೊರಗೆ ನಿಲ್ಲುತ್ತಾನೆ.

ಹೆಂಗಸು : (ಹೊರಗಿಂದ) ಹುಂ. ಹೊರಡು. ನೀನು ಬರ ಬಾರದು. ಹೇಳಿಲ್ವ ಆಗ ?

ಕೊಂಚ ಮೇಲುಕೋನದಲ್ಲಿ ಕಾಣುವಂತೆ ದೂರಚಿತ್ರದಲ್ಲಿ ಪಜಾರವನ್ನು ಹಾದು ಮೆಟ್ಟಿಲಿನತ್ತ ಧಾವಿಸುತ್ತಾನೆ.

ಹೆಂಗಸು : ಏಯ್, ಎಲ್ಲಿ ಹೋಗ್ತಿದೀ ಅಂತ ತಿಳಿದಿದೀಯೆ ? ಏಯ್.

ಆತ ಮೆಟ್ಟಲೇರುತ್ತಿದ್ದಂತೆ ಅರೆಬೆತ್ತಲೆ ಹುಡುಗಿಯೊಬ್ಬಳು ಕೆಳಗೆ ಬರುತ್ತಿದ್ದವಳು ಇವನ ಆಗಮನದಿಂದ ಬೆರಗಾಗಿ ಪಕ್ಕದ ಕೋಣೆ ಸೇರಿಕೊಳ್ಳುತ್ತಾಳೆ. ಆ ಹೆಂಗಸು ಮೆಟ್ಟಿಲನ ಬುಡಕ್ಕೆ ಬಂದಿದ್ದಾಳೆ.

ಹೆಂಗಸು : ಹೇ, ಇದು ಹೊತ್ತಲ್ಲ....ಈಗ ಮೇಲೆ ಹೋಗ ಬೇಡ. ಮುಚ್ಚಿದೆ ಈಗ....

ಹೊರಗೆ ಕಾಯುತ್ತಾ ನಿಂತ ಬ್ರೂನೋ. ಆತ ಅಲ್ಲಿ ನೇತು ಹಾಕಿದ ಫಲಕವನ್ನು ಓದುತ್ತಾನೆ.

ಹೆಂಗಸು : (ಹೊರಗಿಂದ) ಕಾನೂನು ಎಲ್ಲರಿಗೂ ಒಂದೇ.... ಹೊರಟು ಬಿಡು....

ಬ್ರೂನೋ ಯೋಚನಾ ಮಗ್ನನಾಗಿ ರಸ್ತೆಗಿಳಿದು ನಡೆಯುತ್ತಾನೆ.

ಧ್ವನಿ : (ಹೊರಗಿಂದ) ಎಲ್ಲಿ.... ಎಲ್ಲಿ ಹೋದ.... ಹಿಡೀರಿ ... ಹಿಡೀರಿ ಅವನ್ನ.... ಹೂಂ.

ಹೆಂಗಸು ಮತ್ತು ಒಬ್ಬ ಮುದುಕ ರಿಚಿಯನ್ನು ಹೊರ ಬಾಗಿಲತ್ತ ದೂಡುತ್ತಿದ್ದಾರೆ. ರಿಚಿ ಅದನ್ನು ತಡೆಯುತ್ತಿದ್ದಾನೆ.

ಕೂಗು — ಕಿರುಚುಗಳು.

ಹೆಂಗಸು : ಥು ಹಂದಿ. ಏನ್ ಮಾಡ್ತಿದೀಯ ?

ರಿಚಿ : ಬಿಡಿ ನನ್ನ. ಇಲ್ಲಿ ಒಳಗೆ ಬಂದ್ನಲ್ಲ – ಆ ಮನುಷ್ಯನ ಹತ್ರ ನಾನು ಮಾತಾಡಬೇಕು.

ರಿಚಿ ಅವರಿಂದ ಬಿಡಿಸಿಕೊಂಡು ಹಿಂದೆ ಆ ಹುಡುಗ ಪ್ರವೇಶಿಸಿದ ಬಾಗಿಲಲ್ಲಿ ಪ್ರವೇಶಿಸುತ್ತಾನೆ. ಕೆಮೆರಾ ಆವನ ಹಿಂದೇ ಹೋಗಿ ಅವನೊಡನೆ ಬಾಗಿಲೊಳಗೆ ಪ್ರವೇಶಿಸುತ್ತದೆ. ಊಟದ ಕೋಣೆಯ ದೂರಚಿತ್ರ. ಗೋಡೆಗಳನ್ನು ನಟರ ಚಿತ್ರಗಳಿಂದ ಅಲಂಕರಿಸಲಾಗಿದೆ. ಮಧ್ಯದ ದೊಡ್ಡ ಮೇಜಿನ ಸುತ್ತ ವೇಶ್ಯೆಯರು ಕೂತಿದ್ದಾರೆ. ಬೆತ್ತಲೆಯ ವಿವಿಧ ಅವಸ್ಥೆಗಳಲ್ಲಿದ್ದಾರೆ. ರಿಚಿ ಪ್ರವೇಶಿಸುತ್ತಿದ್ದಂತೆ ಕೆಲವು ಹುಡುಗಿಯರು ಆತನನ್ನು ಹಿಂದೆದೂಡಲು ಪ್ರಯತ್ನಿಸುತ್ತಾರೆ. ರಿಚಿಗೆ ಎದುರಿಗೆ ಕೂತ ಕಳ್ಳ ಕಾಣುತ್ತಾನೆ.

ಧ್ವನಿಗಳು : ಹುಂ.... ಹಿಡಕೊಳ್ಳಿ.... ಹೊರಗೆ ಕಳ್ಸಿ.

ರಿಚಿ : (ಜೆಟ್ಟು ಮಾಡಿ ತೋರಿಸುತ್ತ) ನಾನು ಅವನ ಹತ್ರ ಮಾತಾಡ ಬೇಕು.

ಕಳ್ಳ : (ನಿಧಾನವಾಗಿ ಮೇಲೇಳುತ್ತ) ನನ್ನ ಹತ್ರ ? ಯಾರು ನೀನು ? ನಿನ್ನ ಪರಿಚಯವೇ ನನಗಿಲ್ಲ.

ಒಬ್ಬ ಹುಡುಗಿ : ಎಂಥ ದಗಲುಬಾಜಿ. ಹೊರಗೆ ಹಾಕಿ ಅವನ್ನ ನಂಗೆ ತಲೆನೋವು ಬೇರೆ.

ರಿಚಿ : (ಗಲಾಟೆಯಲ್ಲೂ ಧ್ವನಿ ಎತ್ತರಿಸಿ) ನಾನು ನಿನ್ನ ಹತ್ರ ಮಾತಾಡ ಬೇಕು.

ಕಳ್ಳ : ನನ್ನ ಹತ್ರ ?

ಒಬ್ಬ ಹುಡುಗಿ : (ತೊಳುಗಳಿಂದ ಕಳ್ಳನನ್ನು ಬಳಸಿ) ಊಹೂಂ.... ಊಹೂಂ....

ಕಳ್ಳ : ಏನು ಹೆದರಿಸ್ತೀಯಾ ? (ಹುಡುಗಿಗೆ) ನೀನು ಸುಮ್ನಿರು (ರಿಚಿಗೆ) ನಾನು ಬೇಕಾ ?

ರಿಚಿ : ಹೌದು.

ಕಳ್ಳ : (ಆಚೆ ನಡೆಯುತ್ತ) ಸರಿ ಬರ್ತೀನೆ.

ಗಲಾಟೆ ಮುಂದುವರೆಯುತ್ತಿದೆ. ಮಧ್ಯಸಮೀಪ ಚಿತ್ರದಲ್ಲಿ ರಿಚಿ ಕಾಣುತ್ತಿದ್ದಾನೆ. ಫಕ್ಕನೆ ಆತ ಕೆಮೆರಾದತ್ತ ಜಿಗಿಯುತ್ತಾನೆ. ಕಳ್ಳನನ್ನು ತಬ್ಬಿ ಕಾಲರ್ ಹಿಡಿದ್ಕೊಳ್ಳುತ್ತಾನೆ.

ಕಳ್ಳ : ಬಿಡು ನನ್ನ. ಬಿಟ್ಟು ಬಿಡು.

ರಿಚಿ : ( ಸಮೀಪ ಚಿತ್ರದಲ್ಲಿ ) ಸಿಕ್ಕಿದ್ಯಾ ಅಂತೂ ! ಹೂಂ. ಕೊಡು ನನ್ನ ಬೈಸಿಕಲ್.

ಕಳ್ಳ : ಏಯ್, ಬಿಡ್ತೀಯೋ ನನ್ನ, ಇಲ್ವಾ ?

ರಿಚಿ ಕಳ್ಳನನ್ನು ಬಾಗಿಲಕಡೆ ಎಳೆಯುತ್ತಿರುವಂತೆ ಕೆಮೆರಾ ಅನುಸರಿಸುತ್ತದೆ. ಹೆಂಗಸರ ಒಂದು ಗುಂಪು ಇವರನ್ನು ಎದುರು ಹಜಾರಕ್ಕೆ ದಬ್ಬುತ್ತಿದೆ.

ರಿಚಿ : ಬಾ ಹೊರಗೆ.

ರಿಚಿ ಕಳ್ಳನನ್ನು ಕೈಬಿಟ್ಟು ಆತನ ಪಕ್ಕಕ್ಕೆ ನಿಲ್ಲುತ್ತಾನೆ. ಹೆಂಗಸು ರಿಚಿಯ ತೋಳು ಹಿಡಿಯುತ್ತಾಳೆ. ರಿಚಿ ಕಳ್ಳನ ತೋಳು ಹಿಡಿಯುತ್ತಾನೆ. ಹೆಂಗಸು ಅವರಿಬ್ಬರನ್ನೂ ಎಳೆಯುತ್ತ ಹೊರ ಬಾಗಿಲತ್ತ ಬಂದು ಅದನ್ನು ತೆಗೆಯುತ್ತಾಳೆ.

ಹೆಂಗಸು : ಇದು ತುಂಬಾ ಅತಿಯಾಯಿತು. ಇಡೀ ರೋಂನಲ್ಲಿ ನಮ್ಮಷ್ಟು ಶಿಸ್ತಿನ ಮನೆ ಬೇರೆ ಇಲ್ಲ.....ನಮ್ಮ ಕಮೀಷನರ್ ಏನಂದಾರು ಕೇಳಿದ್ರೆ.

ರಿಚಿ ಕಳ್ಳನನ್ನು ಎಳೆದು ಕೊಳ್ಳುತ್ತಾನೆ. ಅಷ್ಟರಲ್ಲಿ ಹೆಂಗಸು ಅವನನ್ನು ಹೊರ ದಬ್ಬಿದ್ದಾಳೆ.

ಹೆಂಗಸು : ಸಾಕು ಸಾಕು....ರಸ್ತೆಗೆಹೋಗಿ ಬಡಿದಾಡಿಕೊಳ್ಳಿ.

ರಸ್ತೆಯ ದೂರ ಚಿತ್ರ. ಮುನ್ನೆಲೆಯಲ್ಲಿ ಬ್ರೂನೋ ಕೆಮೆರಾಕ್ಕೆ ಬೆನ್ನಾಗಿ ನಿಂತು ಆ ಬಾಗಿಲಿನತ್ತ ಆಸೆಯಿಂದ ನಿರೀಕ್ಷಿಸುತ್ತಿದ್ದಾನೆ. ತಂದೆ ಕಳ್ಳನ ಜೊತೆ ಅಲ್ಲಿ ಕಾಣಿಸಿ ಕೊಳ್ಳುತ್ತಾನೆ. ರಿಚಿ ಕಳ್ಳನನ್ನು ಕ್ರೂರವಾಗಿ ಗೋಡೆಗೆ ತಳ್ಳಿ ಒತ್ತಿ ಹಿಡಿದಿದ್ದಾನೆ.

ಹಿನ್ನೆಲೆಯಲ್ಲಿ ವ್ಯಂಗ್ಯವಾದ ಸೈನಿಕ ಸಂಗೀತ.

ಕಳ್ಳ : ಏನು ಬೇಕು ನಿಂಗೆ ?

ಬ್ರೂನೋ ತಂದೆಯ ಕಡೆ ಓಡುತ್ತಾನೆ. ಮಧ್ಯ ಸಮೀಪ ಚಿತ್ರದಲ್ಲಿ ರಿಚಿ ಕಳ್ಳನನ್ನು ಹಿಡಿದು ಮುಂದೆ ತಳ್ಳುತ್ತಾನೆ. ಕಳ್ಳ ಭಯದಿಂದ ಮುಂದೆ ನಡೆಯುತ್ತಿದ್ದಾನೆ. ರಿಚಿ ಮತ್ತು ಬ್ರೂನೋ ಅವನ ಬೆನ್ನು ಬಿಟ್ಟಿಲ್ಲ.

ರಿಚಿ : ನೀನು ಏನು ತಗೊಂಡ್ಯೋ ಅದನ್ನು ವಾಪಸ್ ಕೊಡು.

ಅವರು ಕೆಮೆರಾಕ್ಕೆ ಬೆನ್ನಾಗಿ ನಡೆಯುತ್ತಲೇ ಇದ್ದಾರೆ.

ಕಳ್ಳ : ನಾನೇನು ತಗೊಂಡೆ ?

ರಿಚಿ ಕೋಪದಿಂದ ಮತ್ತೆ ಅವನನ್ನು ಹಿಡಿದು ಗೋಡೆಗೆ ಅಪ್ಪಳಿಸುತ್ತಾನೆ. ಅವರಿಬ್ಬರ ಮಧ್ಯಸಮೀಪ ಚಿತ್ರ.

ರಿಚಿ : (ಕ್ರೋಧದಿಂದ) ನನ್ನ ಬೈಸಿಕಲ್.... ನನ್ನ ಬೈಸಿಕಲ್ಲು, ಗೊತ್ತಾಯ್ತಾ ?

ಕಳ್ಳ : (ಪಲಾಯನಕ್ಕೆ ಪ್ರಯತ್ನಿಸುತ್ತ) ಬೈಸಿಕಲ್ ? ನಂಗೊತ್ತಿಲ್ಲ. ನಾನು ಕದಿಯೋದಿಲ್ಲ.

ರಿಚಿ : (ಅವನು ತಪ್ಪಿಸಿಕೊಳ್ಳುವುದನ್ನು ತಡೆಯುತ್ತ) ಉಹುಂ. ಅದೆಲ್ಲ ನನ್ನ ಕೈಲಿ ನಡೆಯಲ್ಲ.

ಕಳ್ಳ : ಹುಷಾರು. ಏನು ಅಂತ ತಿಳಿದಿದೀಯೆ ? ನನ್ನ ಗೋಳು ಹೊಯ್ಕೊಬೇಡ. ನಿನ್ನ ಆ ಗೋಡೆಗೆ ಹಾಕಿ ಅರಚಿ ಬಿಟ್ಟೇನು.

ರಿಚಿ : ನೆನಪು ಮಾಡು. ನೀನು ಬಾಯಿ ಬಿಡೋತನಕ ನಿನ್ನ ಬಿಡೋದೇ ಇಲ್ಲ ನಾನು.

ಕಳ್ಳ : ....ಇವನ ಮಾತು ಕೇಳಿ.... ಒಳ್ಳೇ ಹುಚ್ಚ ಒದರಿದ ಹಾಗೆ ಒದರ್ತಾನಲ್ಲ.

ರಿಚಿ : ಹುಚ್ಚ ನೀನು. ನಾನಲ್ಲ.

ಕಳ್ಳ : (ರಿಚಿ ಕಾಲರ್ ಹಿಡಿದಿರುವಂತೆ, ಭಯದಿಂದ) ನನ್ನ ಬಿಡು. ಇಷ್ಟು ಮಾಡಿದ್ದು ಸಾಲದಾ ?

ದೂರ ಚಿತ್ರ. ಅವರು ಸೆಣಸಾಡುತ್ತಿದ್ದಂತೆ ದಾರಿ ಹೋಕರು ನಿಧಾನವಾಗಿ ಒಬ್ಬೊಬ್ಬರೇ ಗುಂಪುಗೂಡುತ್ತಾರೆ. ಒಬ್ಬ ವ್ಯಕ್ತಿ ಮಗುವನ್ನೆತ್ತಿಕೊಂಡು ಹೋಗುತ್ತಿದ್ದಾನೆ. ಅವನ ಮುಖ ಪರಿಚಯದ್ದಾಗಿದೆ. ಹಿಂದೆ ರಿಚಿಗೆ ಸೈಕಲ್ ಹುಡುಕಲು ಸಂಗಾತಿಯಾಗಿದ್ದಾತ ಅವ. ಅವನು ಈ ಗಲಾಟೆ ಕಾಣುತ್ತಲೇ ಬಂದ ದಾರಿಯಲ್ಲಿಯೇ ತಿರುಗಿ ಹಿಂದೆ ನಡೆಯುತ್ತಾನೆ.

ರಿಚಿ : (ಹೊರಗಿಂದ) ನನಗೂ ಬೇಕಾದಷ್ಟಾಗಿದೆ.

ಕಳ್ಳ : (ಹೊರಗಿಂದ) ಬಿಡು. ನನ್ನ ಪಾಡಿಗೆ ನಾನು ಸಾಯ್ತೀನೆ.

ರಿಚಿ : ಬಿಡೋದಿಲ್ಲ. ನಿನ್ನೆ ಫಿಯೋರಾಲಾದಲ್ಲಿ ಕದ್ದೆ ನೋಡು. ಆ ಬೈಸಿಕಲ್ ಕೊಡೋತನಕ ನಾನು ಬಿಡೋದಿಲ್ಲ.

ಗುಂಪುಗೂಡುತ್ತಿರುವುದನ್ನು ಕಂಡು ಬ್ರೂನೋ ಚಿಂತೆಗೀಡಾಗಿದ್ದಾನೆ.

ಕಳ್ಳ : ನಿನ್ನೆ ನಾನು ಫಿಯೋರಾಲಾದ ಹತ್ರ ಇರ್ಲೇ ಇಲ್ಲ.

ಕೊಂಚ ಮೇಲುಕೋನದಿಂದ ಕಾಣುವ ಮಧ್ಯ ಸಮೀಪ ಚಿತ್ರ : ಗುಂಪಿನಿಂದ ಸುತ್ತುವರೆದ ಈ ಇಬ್ಬರು.

ರಿಚಿ : (ಅವನನ್ನು ಒತ್ತುತ್ತ) ಇದ್ದೆ.... ನೀನು ಇದ್ದೆ.... ನೀನು ಇದ್ದೆ.... ಇದೇ ಟೋಪಿ ಹಾಕ್ಕೊಂಡಿದ್ದೆ.

ರಿಚಿ ಅವನ ಟೋಪಿ ತೆಗೆದು ಬೀಸಿ ತೋರಿಸುತ್ತಾನೆ.

ದಾರಿಗ. ೧ : ಹುಂ. ಸರಿ....

ದಾರಿಗ. ೨ : ಒಳ್ಳೇಕಥೆ. ಹಾಗೆ ಕಂಡೋರೆಲ್ಲ ಕದ್ದಿದಾರೆ ಅಂತ ಹೇಳಕ್ಕೆ ಬರತ್ತಾ ?

ಕೂಡಿದ ಜನರ ಗುಂಪು ವಿರೋಧವಾಗಿ ಕಂಡರೂ ರಿಚಿ ಅವನೇ ಕಳ್ಳನೆಂಬ ವಿಶ್ವಾಸದಿಂದ ಆತನನ್ನು ಅಲುಗಿಸುತ್ತಲೇ ಇದ್ದಾನೆ.

ರಿಚಿ : ಇಲ್ಲೇ ಸತ್ತಿರಬಹುದಂತೆ.... ಕೈಗೆ ಸಿಕ್ಕಿದೀಯ. ನಾನು ನಿನ್ನ ಬಿಡ್ತೀನಿ ಅಂತ ತಿಳಿದಿದೀಯಾ ?

ಕಳ್ಳನ ತಾಯಿ : (ಹೊರಗಿಂದ) ಏಯ್.... ಯಾರದು ? ....ನನ್ನ ಮಗನ ಹತ್ರ ಏನ್ ಕೆಲಸ ನಿಂಗ ?

ಎಲ್ಲರೂ ಮೇಲಕ್ಕೆ ನೋಡುತ್ತಾರೆ. ಒಂದು ಮಹಡಿಯ ಕಿಟಕಿಯಲ್ಲಿ ಬಿಳಿಗೂದಲಿನ ಒಬ್ಬ ಹೆಂಗಸು ಇಣುಕಿದ್ದಾಳೆ. ಆಕೆ ಕೋಪಗೊಂಡಿದ್ದಾಳೆ.

ತಾಯಿ : ಅಲ್‌ಫ್ರೆಡೊ. ಬಾ. ಕೂಡಲೇ ಬಂದುಬಿಡು ಒಳಗೆ.

ಗುಂಪಿನ ಮಧ್ಯದಲ್ಲಿ ಕಳ್ಳ ಮತ್ತೊಮ್ಮೆ ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದಾನೆ. ರಿಚಿ ಅವನನ್ನು ಹಿಡಿದು ಕೊಳ್ಳುತ್ತಾನೆ.

ರಿಚಿ : ಸೂಳೇಮಗನೆ.... ತಪ್ಪಿಸ್ಕೋತಿಯಾ....

ಕಳ್ಳ : (ನಡುಗುತ್ತ) ಬಿಡು.... ಬಿಡು.... ಮುಟ್ಟಬೇಡ ನನ್ನ....

ಆತ ಉದ್ರಿಕ್ತ ಸ್ಥಿತಿಯಲ್ಲಿರುವಂತಿದೆ.

ವ್ಯಂಗ್ಯ ಸೈನಿಕ ಸಂಗೀತ ನಿಲ್ಲುತ್ತದೆ.

ಒಳ್ಳೇ ಬಟ್ಟೆ ಧರಿಸಿದಂತೆ ಕಾಣುವ ಆದರೆ ರೌಡಿಗಳಂತೆ ತೋರುವ ಇಬ್ಬರು ದಾರಿ ಮಾಡಿಕೊಂಡು ಗುಂಪಿನೊಳಕ್ಕೆ ಬರುತ್ತಾರೆ. ಅವರಲ್ಲೊಬ್ಬ – ಕಪ್ಪು ಕನ್ನಡಕ ಹಾಕಿದವ — ಸೊಕ್ಕಿನಿಂದ ರಿಚಿಯನ್ನು ಸಮೀಪಿಸುತ್ತಾನೆ.

ಕಪ್ಪುಕನ್ನಡಕದವ : ಅಂದ್ರೆ.... ನಿನ್ನ ಸೈಕಲ್ ಯಾರೋ ಕದ್ದಿದಾರೆ.... ಅಲ್ಲ ?

ರಿಚಿ : ಹೌದು ಹಾರಿಸ್ಕೊಂಡು ಹೋಗಿದಾರೆ.

ಇನ್ನೊಬ್ಬ : ಹೋಗಿ ಯಾರನ್ನೋ ಹಿಡಿದು ನೀನೇ ಕದ್ದಿದ್ದು ಅಂತ ಹೇಳ್ತೀಯಲ್ಲ.... ಇವನೇ ಅಂತ ನಿಶ್ಚಯವಾಗಿ ಗೊತ್ತಾ ?

ರಿಚಿ : ಖಂಡಿತ ಗೊತ್ತು.

ಇನ್ನೊಬ್ಬ : ಅದು ಕಳುವಾದ್ದೆಲ್ಲಿ ?

ರಿಚಿ : ಫಿಯೋರಾಲಾದ ಹತ್ರ.

ಮತ್ತೊಬ್ಬ : ನಿಂಗೆ ಅಷ್ಟು ಖಂಡಿತ ಇದ್ರೆ ಒಬ್ಬ ಪೋಲೀಸ್‌ನವನನ್ನ ಕರ್ಕೊಂಬಾ. ಇವನು ಓಡಿಹೋಗಲ್ಲ. ಇಲ್ಲೇ ಇರ್ತಾನೆ.

ಈ ಮಾತು ಕೇಳಿದೊಡನೆ ಬ್ರೂನೊ ಗುಂಪಿನಲ್ಲಿ ನುಗ್ಗಿ ಹೊರಹೋಗಲು ಪ್ರಯತ್ನಿಸುತ್ತಾನೆ.

ಕಳ್ಳ : ಹೌದು.... ಹೋಗಿ ಕರ್ಕೊಂಬಾ. ನಾ ಇಲ್ಲೇ ಇರ್ತೀನೆ ನನ್ನ ಹತ್ರ ಮುಚ್ಚಿಡೋದೇನೂ ಇಲ್ಲ,

ಮತ್ತೆ ರಿಚಿ ಅವನನ್ನು ಅಮುಕಿ ಹಿಡಿಯುತ್ತಾನೆ.

ರಿಚಿ : ನಾನು ಮೂರ್ಖ ಅಲ್ಲ. ನಿನ್ನ ಬಿಡ್ತೀನೆ ಅಂತ ತಿಳಿದಿದೀಯಾ ? ನಿಲ್ಲು ಅಲ್ಲೇ.

ಕಳ್ಳ : (ಸನ್ನಿ ಹಿಡಿದವನಂತೆ) ನಾನು ನಿನ್ನ ನೋಡೇ ಇರ್ಲಿಲ್ಲ ....ಬಿಡು ಬಿಡು.... ನನ್ನ....

ತಾಯಿ : (ಹೊರಗಿಂದ) ಅಯ್ಯೊ.... ಅಲ್‌ಫ್ರೆಡೋ.... ನನ್ನ ಪುಟ್ಟಮಗ, ಅಯ್ಯೊ.... ಆಲ್‌ಫ್ರೆಡೋ....

ಆವನ ಟೋಪಿ ನೆಲಕ್ಕೆ ಬೀಳುತ್ತದೆ. ಮೂರ್ಛೆ ರೋಗ ಬಂದವರಂತೆ ಆತ ಕಂಪಿಸತೊಡಗುತ್ತಾನೆ. ಮೊದಲು ರಿಚಿಗೆ ಇದೆಲ್ಲ ಆಟ ಅನ್ನಿಸಿದರೂ ಆಮೇಲೆ ಏನೆಂದು ತಿಳಿಯದೆ ಆವನನ್ನು ಬಿಡುತ್ತಾನೆ. ಕಳ್ಳ ನೆಲಕ್ಕೆ ಬೀಳುವುದಿಲ್ಲ. ಬದಿಗೆ ಇದ್ದವರು ಆವನನ್ನು ಹಿಡಿಯುತ್ತಾರೆ ಆತ ನಿಧಾನವಾಗಿ ಕುಸಿಯುತ್ತಾನೆ. ಬಾಯಲ್ಲಿ ನೊರೆ ಬರತೊಡಗಿದೆ. ಮೂರ್ಛೆ ಹೋಗಿದ್ದಾನೆ. ರಿಚಿ ದೂರ ಚಿತ್ರದಲ್ಲಿ ಮೂಕನಾಗಿ ನಿಂತಿದ್ದಾನೆ. ಕರಿಕನ್ನಡದವ ರಿಚಿಯನ್ನು ಮೆಲ್ಲಗೆ ತಟ್ಟುತ್ತಾನೆ.

ಕ. ಕ. : ಇನ್ನು ಹೋಗೋದು ಒಳ್ಳೇದು ನೀನು.

ಧ್ವನಿಗಳು : (ಹೊರಗಿಂದ) ನಿದಾನ.... ನಿದಾನ.... ಕೈ ಹಿಡಿ ಕೊಳ್ಳಿ.... ಹುಷಾರು.

ಇನ್ನೊಬ್ಬ : ನೋಡು ನೀ ಮಾಡಿದ ಅವಾಂತರ. ಈಗ ಸಂತೋಷ ಆಯ್ತಾ ?

ಕ. ಕ. : ಹಾಗೆ ಕಂಡೊರ್ನೆಲ್ಲ ಕಳ್ಳ ಅನ್ನಬಾರ್ದು.

ತಾಯಿ : (ನರಳುತ್ತ) ಅಯ್ಯೋ.... ಅಯ್ಯೋ.... ಅಲ್‌ಫ್ರೆಡೋ ....ಆತನ ತಲೆ ನೋಡಿಕೊಳ್ಳಿ.... ಹುಷಾರು.

ಮಧ್ಯ ಸಮಿೂಪ ಚಿತ್ರದಲ್ಲಿ ರಿಚಿ. ಆತ ನಿಧಾನವಾಗಿ ತಲೆ ತಗ್ಗಿಸುತ್ತಾನೆ. ಆತನ ನೋಟದ ಜೊತೆ ಕೆಮೆರಾ ನಿಧಾನವಾಗಿ ಕೆಳಮುಖವಾಗಿ ಬಾಗಿ ಸುತ್ತಲಿನ ಜನರ ಗುಂಪನ್ನು ಕಾಣಿಸುತ್ತದೆ.

ಕ. ಕ. : (ರಿಚಿಗೆ) ನಾನು ನೀನೇ ಆಗಿದ್ರೆ.... ಹೀಗೆ ಇಲ್ಲಿ ನಿಲ್ತಿರಲಿಲ್ಲ.

ಮಧ್ಯ ಚಿತ್ರದಲ್ಲಿ ತಾಯಿ ಒಂದು ದಿಂಬು ಹಿಡಿದು ಬರುತ್ತಿದ್ದಾಳೆ.

ತಾಯಿ : ಆಲ್‌ಫ್ರೆಡೋ.... ಆಲ್‌ಫ್ರೆಡೋ.... ಅಯ್ಯೋ.... ಅವನಿಗೆ ಏನು ಬೇಕಂತಪ್ಪಾ.... ಕಳಿಸಿ ಅವನ್ನ ಇಲ್ಲಿಂದ.... ಅಯ್ಯೋ ತೆಗೆದ ನನ್ನ ಮಗನ್ನ.... ತಗೋಳಿ.... ಇದನ್ನ ಅವನ ತಲೆ ಕೆಳಗಿಡಿ....

ಆಕೆ ಮಗನ ಬಳಿ ಮೊಳಕಾಲೂರಿ ಕೂರುತ್ತಿರುವಂತೆ ಕೆಮೆರಾ ಮುಖ ತಗ್ಗಿಸುತ್ತದೆ.

ತಾಯಿ : ಹಾಂ.... ಅಲ್ಲೇ.... ಹಾಗೇ ಹಾಗೇ.... ಅಯ್ಯೋ ನನ್ನ ಪುಟ್ಟ ಮಗನೇ....

ಮಧ್ಯ ಸಮಿೂಪ ಚಿತ್ರದಲ್ಲಿ ರಿಚಿ. ಆತನ ಸುತ್ತ ಕೂಡಿದ ಗುಂಪು ಆತನನ್ನು ತಳ್ಳುತ್ತಿದೆ. ಬೆದರಿಸುತ್ತಿದೆ.

ದಾರಿಗರು : ಇಲ್ಲೇ ನಿಂತ್ಯಾ ಮತ್ತೆ ? ಹೊರಡು.... ಹೂಂ. ಕಾಲುಕೀಳು. ನಿನ್ನ ಹಾಳು ಮುಖ ನೋಡೋಕೆ ಹೇಸಿಗೆಯಾಗತ್ತೆ.

ರಿಚಿ : (ಕೋಪೋದ್ರೇಕದಿಂದ) ಕೈತೆಗಿರಿ.... ನೀವೆಲ್ಲ ಕಳ್ಳರು (ಅರಚುತ್ತ) ....ಎಲ್ಲರೂ ಎಲ್ಲರೂ ಕಳ್ಳರು.

ದಾರಿಗರು : (ರಿಚಿಯನ್ನು ಹಿಂದಕ್ಕೆ ತಳ್ಳುತ್ತ) ಸಿಕ್ಕ ಸಿಕ್ಕ ಹಾಗೆ ನಾಲಗೆ ಹರಿಬಿಡಬೇಡ.... ಯಾರ ಮೇಲೆ ಹೇಳ್ತಿದೀಯ ನೀನು.... ನೀನು ಎಲ್ಲಿದೀಯ ಅಂತ ನೆನಪಿದೆಯಾ ?

ಸೈಕಲ್ ಅಲ್ಲ ಮತ್ತೂ ಹೋಗಬಹುದಾಗಿತ್ತು.

ಅವರೆಲ್ಲಾ ರಿಚಿಯನ್ನು ಹಿಡಿದು ಒಂದು ಗೋಡೆಗೆ ಒತ್ತುತ್ತಾರೆ. ಅವರ ಮುಖ ಭಾವ ಮತ್ತು ಚೇಷ್ಟೆಗಳು ಹಿಂಸ್ರವಾಗುತ್ತವೆ. ತುದಿಗೆ ರಿಚಿ ಏನೂ ತೋರದೆ ಶೂನ್ಯ ಮನುಷ್ಯನಾಗಿ ಒಂದು ಕಟ್ಟೆಗೆ ಕೋಲೆತ್ತಿಕೊಂಡು ಸುತ್ತ ಬೀಸತೊಡಗುತ್ತಾನೆ.

ರಿಚಿ : ಬಿಡಿ.... ನನ್ನ ಪಾಡಿಗೆ ನನ್ನ ಬಿಡಿ.... ಒಬ್ಬನ ಮೇಲೆ ನೂರು ಜನ....ಹಲ್ಕಾ ಜನ ನೀವು.... ಮುಖದ ಮೇಲೆ ಬಡೀತೇನೆ ನಾನು....

ದಾರಿಗರು : ಹಾಂ....ಅದೇನು ಮಾಡ್ತೀ ಮಾಡು.... ಹುಂ.... ಬಾ....

ರಿಚಿ : ಹಲ್ಕಾ ಸೂಳೆಮಕ್ಕಳಾ.... ಕಳ್ಳ ಸೂಳೇಮಕ್ಕಳ್ರು ನೀವು.... ಕಳ್ಳರು.... ಹಸೀ ಕಳ್ಳರು.

ರಿಚಿಯನ್ನು ಸುತ್ತುವರೆದ ಗುಂಪಿನ ದೂರಚಿತ್ರ. ಮೇಲುಕೋನದಿಂದ ಕಾಣುತ್ತಿದೆ. ಅಷ್ಟರಲ್ಲಿ ಮೇಲಿಂದ ಯಾರೋ ಗುಂಪಿನ ಮೇಲೆ ನೀರು ಚೆಲ್ಲುತ್ತಾರೆ. ಅವರೆಲ್ಲ ಮೇಲೆ ನೋಡುತ್ತಾರೆ.

ದಾರಿಗರು ಹೇ.... ಏನಾಗಿದೆ ನಿಂಗೆ ... ಏನು ಮಾಡ್ತಿದೀಯ ?

ಕೆಮೆರಾ ಮುಖವೆತ್ತಿದಾಗ ಅಲ್ಲಿ ಒಬ್ಬ ವ್ಯಕ್ತಿ ಬರಿದಾದ ಬಕೆಟ್ ಹಿಡಿದು ನಿಂತಿದ್ದಾನೆ.

ವ್ಯಕ್ತಿ : ಅವನಿಗೆ ಸ್ವಲ್ಪ ತಂಪು ಮಾಡೋಣ ಅಂತ.

ಎಲ್ಲರೂ ನಗುತ್ತಾರೆ, ರಸ್ತೆಯ ದೂರ ಚಿತ್ರ. ದೂರದಲ್ಲಿ ಬ್ರೂನೋ ಒಬ್ಬ ಪೋಲೀಸ್‌ನವನ ಜೊತೆ ಬರುತ್ತಿದ್ದಾನೆ. ಬ್ರೂನೋ ಗುಂಪಿನತ್ತ ಕೈಮಾಡಿ ತೋರಿಸುತ್ತಿದ್ದಾನೆ.

ಮತ್ತೆ ಸೈನಿಕ ಸಂಗೀತ.

ತನ್ನ ಆಯುಧ ಇನ್ನೂ ಹಿಡಿದು ನಿಂತಿರುವ ರಿಚಿಯ ಮಧ್ಯ ಚಿತ್ರ. ಆತ ಪೋಲೀಸ್‌ನವನನ್ನು ಕಂಡೊಡನೆ ಕೋಲು ಕೆಳಕ್ಕೆ ಬಿಡುತ್ತಾನೆ. ಗುಂಪು ಪೋಲೀಸ್‌ನವನನ್ನು ಕಂಡು ಮೌನವಾಗಿ, ರಿಚಿಯನ್ನು ಬಿಟ್ಟು ದೂರ ಸರಿಯುತ್ತದೆ. ಮಧ್ಯ ಚಿತ್ರದಲ್ಲಿ ಪೋಲೀಸ್‌ನವ ಮುಂದೆ ನಡೆದು ಮಗನ ತಲೆಯನ್ನು ಹಿಡಿದು ಕೂತಿರುವ ತಾಯಿಯ ಬಳಿ ಹೋಗುವುದು ಕಾಣುತ್ತದೆ.

ಪೋಲೀಸ್ : ಹುಂ.... ಈಗ ಸೈಕಲ್‌ನ ಯಜಮಾನ ಎಲ್ಲಿದಾನೆ ?

ರಿಚಿ : (ಮುಂದೆ ಬರುತ್ತ) ನಾನೇ.... ನಾನು. (ಕಳ್ಳನನ್ನು ತೋರಿಸುತ್ತ) ಆತ ಕದ್ದು ಈಗ ಮಾರಸೋದಕ್ಕೆ ಪ್ರಯತ್ನಿಸ್ತಿದಾನೆ.

ಗುಂಪಿನಲ್ಲಿರುವ ಕೆಲವರ ಮಧ್ಯ ಸಮೀಪ ಚಿತ್ರ.

ದಾರಿಗ : ಮರಸೋದು ಅಂದ್ರೆ ?

ಇನ್ನೊಬ್ಬ : ಅವನೇನಾದ್ರೂ ನಟನೆ ಮಾಡ್ತಾನೆ ಅಂತಾಗಿದ್ರೆ ಗೊತ್ತಾಗಿ ಬಿಡ್ತಿತ್ತು.

ಮತ್ತೊಬ್ಬ : ಅವನಿಗೆ ಕಾಯಿಲೆ ಇರೋದು ನಿಜ.

ಇನ್ನೊಬ್ಬ : ಪಾಪ ಸುಳ್ಳು ಸುಳ್ಳೇ ಅಪವಾದ ಹೊರೆಸಿದ್ರೆ ಆಘಾತ ಆಗತ್ತೆ ನೋಡಿ....ಛೆ, ಎಚ್ಚರಾನೇ ತಪ್ಪಿ ಬಿಡ್ತು.

ಕಳ್ಳ : (ಪ್ರಯಾಸದಿಂದ ತಲೆ ಎತ್ತುತ್ತ) ನಾನು ಹೇಳ್ತೀನೆ ಸ್ವಾಮಿ. ನಾನು ವಿವರವಾಗಿ ಹೇಳ್ತೀನೆ....ಸ್ವ....ಸ್ವ....ಲ್ಪ.... ತಡೀರಿ. ನಾನು....ನಾನು.... ಏನೂ ಮುಚ್ಚಿಡಲ್ಲ.

ತಾಯಿ : ಅಯ್ಯೋ, ನನ್ನ ಮಗ ಅಂಥವನಲ್ಲಪ್ಪಾ. ಶುಭಗ, ಎಲ್ಲರಿಗೂ ಗೊತ್ತು.

ಮತ್ತೊಬ್ಬ : ಪಾಪ. ಆಲ್‌ಫ್ರೆಡೋಗೆ ಏನಾಗಿ ಬಿಡ್ತು ನೋಡಿ.

ತಾಯಿ : ಯಾರು ಬೇಕಾದ್ರೂ ಕೇಳಿ. ಯಾರಾದ್ರೂ ಹೇಳ್ತಾರೆ. ಅವನು ತುಂಬ ಒಳ್ಳೇ ಹುಡುಗ.

ಎಲ್ಲರೂ : ಹೌದು.... ಹೌದು....

ಮತ್ತೊಬ್ಬ : ಪಾಪ.... ಇಷ್ಟೆಲ್ಲ ಆಗಿದ್ದು ಆ ಜರ್ಮನ್ ಟೋಪಿಯಿಂದ....

ಇನ್ನೊಬ್ಬ : (ತನ್ನ ಟೋಪಿ ಆಡಿಸುತ್ತ) ಇಕೋ. ನಂದೂ ಜರ್ಮನ್ ಟೋಪಿಯೇ ಅಲ್ಲವಾ ?

ಎಲ್ಲರೂ ನಗುತ್ತಾರೆ.

ಪೋಲೀಸ್ : (ಕಳ್ಳನಿಗೆ) ಹುಂ.... ಏಳು.... ಏಳು....

ತಾಯಿ : ಇಲ್ಲಪ್ಪಾ.... ಅಲುಗಾಡೋಕೂ ಆಗಲ್ಲ ಅವನಿಗೆ....

ಇನ್ನೊಬ್ಬ : ಆಸ್ಪತ್ರೆಗಾದ್ರೂ ಕರ್ಕೊಂಡು ಹೋಗೋದು ಒಳ್ಳೇದು.

ಪೋಲೀಸ್ : (ತಾಯಿಗೆ) ಸರಿಹಾಗಾದ್ರೆ. ನಿನ್ನ ಮನೆ ಒಳಗೆ ತೋರ್ಸು ಬಾ.

ಕೆಮೆರಾ ಲಾಳ ತಿರುಗಿ, ಆಕೆ ಪೋಲೀಸ್‌ನವನನ್ನೂ ತನ್ನ ಮನೆಯೊಳಗೆ ಕರೆದೊಯ್ಯುತ್ತಿದ್ದಂತೆ, ಅವರ ಹಿಂದೆ ಚಲಿಸುತ್ತದೆ.

ಸೈನಿಕ ಸಂಗೀತ ಕ್ರಮೇಣ ಕ್ಷಯಿಸುತ್ತದೆ.

ತಾಯಿ : ಅಯ್ಯೋ ದಯಮಾಡಿ ಬನ್ನಿ. ಸಂಭಾವಿತರಾಗಿ ಬದುಕೋರ ಮನೆ.... ಬನ್ನಿಯಪ್ಪಾ ...ಬನ್ನಿ.... ಹೀಗೆ ಬನ್ನಿ ನೋಡಬಹುದಂತೆ.

ಆಕೆ ಮೊದಲು ಮನೆಯೊಳಕ್ಕೆ ಹೋಗುತ್ತಾಳೆ. ಅವಳ ಹಿಂದೆ ಪೋಲೀಸ್‌ನವ ಬರುತ್ತಾನೆ. ರಿಚಿ-ಬ್ರೂನೋ ಅನುಸರಿಸುತ್ತಾರೆ. ಬಾಗಿಲಿನ ಎರಡೂ ಕಡೆ ಗೋಡೆಗೆ ಆ ಕಡೆ ಒಬ್ಬ ಹೆಂಗಸು ಈ ಕಡೆ ಒಬ್ಬ ಗಂಡಸು ಒರಗಿ ನಿಂತಿದ್ದಾರೆ.

ಗಂಡಸು : (ರಿಚಿಯ ಕಡೆ ನೋಡಿ) ನಾನು ಅವನನ್ನು ಕೋರ್ಟಿಗೆ ಕಳಿಸ್ತಿದ್ದೆ.

ಹೆಂಗಸು : (ರಿಚಿಗೆ) ಏನು ಬೇಕು ನಿಂಗೆ? ಆಲ್‌ಫ್ರೆಡೋ ಒಂದು ನೊಣಾನೂ ನೋಯಿಸೋವನಲ್ಲ.

ಕಳ್ಳನ ಮನೆಗೆ ಹೋಗುವ ಇಕ್ಕಟ್ಟಾದ ಮೆಟ್ಟಿಲುಗಳು. ಬಾಗಿಲು ತೆರೆದುಕೊಳ್ಳುತ್ತದೆ. ತಾಯಿ ಮುಂದೆ ಹೋಗುತ್ತಾಳೆ. ಗುಂಪು ಅನುಸರಿಸುತ್ತದೆ. ತಾಯಿ ಆ ಕೋಣೆಯ ಎಲ್ಲ ಕಡೆ ಓಡಾಡುತ್ತ ತೋರಿಸುತ್ತಾಳೆ. ದೊಡ್ಡದೇನೂ ಅಲ್ಲದ ಖಾಲಿ ಖಾಲಿಯಾಗಿ ಕಾಣುವ ಕೊಳಕು ಕೋಣೆ. ಒಂದು ಬದಿಗೆ ಬಾಗಿಲು, ಇನ್ನೊಂದು ಬದಿಗೆ ಸ್ಟೌ ಪಾತ್ರೆಗಳು. ಮಧ್ಯೆ ಗುಂಪು ನಿಲ್ಲುತ್ತದೆ. ತಾಯಿ ಓಡಾಡಿದಂತೆ ಕೆಮೆರಾ ಲಾಳ ತಿರುಗುತ್ತದೆ.

ತಾಯಿ : ಹೂಂ ಬಂದವ್ರೆಲ್ಲ, ನೋಡಿ.... ಏನಿದೆ ಇಲ್ಲಿ ನೋಡೋದಕ್ಕೆ.... ಇಲ್ಲಿ ಅವನು ಮಲಕ್ಕೋತಾನೆ. (ಹಾಸಿಗೆ ಎತ್ತುತ್ತ) ಈ ಹಾಸಿಗೆ ಕೆಳಗೆ ನೋಡಿ, ಸೈಕಲ್ ಇಟ್ಟುಬಿಟ್ಟದಾನೆ ಅಂತ ಅನುಮಾನ ಆಪ್ರೆ. (ರೂಂ ನ ಸುತ್ತ ತಿರುಗುವುದನ್ನು ಮುಂದುವರೆಸುತ್ತ) ಅಲ್ಲಿರೋದು ನನ್ನ ಮಗಳ ಹಾಸಿಗೆ, ಅದು ಇನ್ನೊಬ್ಬ ಮಗಂದು. ನನ್ನ ಹಾಸಿಗೆ ಇಲ್ಲಿದೆ. ಹೂ. ಹುಡುಕಿ. (ಆಕೆಯ ಕೊನೆಯ ಮಾತುಗಳು ಚೌಕಟ್ಟಿನ ಹೊರಗಿಂದ ಕೇಳುತ್ತದೆ).

ಅಲ್ಲ ಯಾವುದೋ ರಾಶಿಯ ಕೆಳಗೆ ಮೋಟಾರ್ ಟೈರೊಂದನ್ನು ಅಡಗಿಸಿಟ್ಟದ್ದು ರಿಚಿ ಮತ್ತು ಪೋಲೀಸ್‌ನವನ ಕಣ್ಣಿಗೆ ಬೀಳುತ್ತದೆ. ತಾಯಿ ಅದರಿಂದ ಗಲಿಬಿಲಿಗೊಂಡಿದ್ದಾಳೆ. ಗಲಿಬಿಲಿಯನ್ನು ಮುಚ್ಚಿಡಲು ಪ್ರಯತ್ನಿಸುತ್ತಿದ್ದಾಳೆ.

ತಾಯಿ : ಓ ಅದು! ಅದು ನನ್ನ ಭಾವಂದು, ಒಂದು ಸಾವಿರದ ನೂರಕ್ಕೆ ಕೊಂಡು ಕೊಂಡಿದ್ದ. ಸ್ವಲ್ಪ ದಿವಸ ಇಟ್ಟುಕೋ ಅಂತ ನನಗೆ ಕೊಟ್ಟಿದ್ದ.... ಆಯ್ತು ಹುಡುಕಿ.... ಸೈಕಲ್ ಸಿಗುತ್ತಾ ನೋಡಿ....ಎಲ್ಲಾದ್ರೂ ಇದೆಯಾ ಸೈಕಲ್ಲು?

ಪೋಲೀಸ್‌ನವ ಸುಮಾರಾಗಿ ಎಲ್ಲಾ ಕಡೆ ಹುಡುಕುತ್ತಿರುವ ಮಧ್ಯ ಚಿತ್ರ. ರಿಚಿ ಮತ್ತು ಬ್ರೂನೋ ಬೇರೆಕಡೆಗಳಲ್ಲಿ ಹುಡುಕುತ್ತಿದ್ದಾರೆ. ತಾಯಿ ಒಂದು ಬದಿಗೆ ನಿಂತು ಇವರನ್ನು ಗಮನಿಸುತ್ತಿದ್ದಾಳೆ. ನಂತರ ಪೋಲೀಸ್ ಒಂದು ಮೂಲೆಗೆ ಹೋಗಿ ರಿಚಿಗೆ ಸನ್ನೆ ಮಾಡುತ್ತಿರುವುದನ್ನು ತೋರಿಸುವ ಲಾಂಗ್.

ಪೋಲೀಸ್ : (ಪಿಸುದನಿಯಲ್ಲಿ) ಏಯ್. ಕೇಳಿದಿ. ಯಾರಾದ್ರೂ ಸಾಕ್ಷಿ ಇದಾರಾ ?

ರಿಚಿ : ನಾನೇ ಸಾಕ್ಷಿ.

ಅವರ ಮಾತುಗಳನ್ನು ಕೇಳಲು ಯತ್ನಿಸುತ್ತಿರುವ ತಾಯಿಯ ಸಮೀಪ ಚಿತ್ರ. ಅನಂತರ ಪೋಲೀಸ್‌ನವ ಆಕೆಯ ಕಡೆ ತಿರುಗುತ್ತಾನೆ.

ಪೋಲೀಸ್ : (ಬಾಗಿಲಕಡೆ ಸೂಚಿಸುತ್ತ) ಒಂದು ಕ್ಷಣ ಹೊರಗಡೆ ಹೋಗ್ತೀರಾ ?

ಆಕೆ ಬಾಗಿಲ ಕಡೆ ಹೋದಂತೆ ಕೆಮೆರಾ ಲಾಂಗ್.

ತಾಯಿ : (ತನ್ನೊಳಗೆ) ಬೇಕಾದಷ್ಟು ಮಾತಾಡಿ.... ಎರಡು ಗಂಟೆ ಮಾತಾಡಿ.... ನಂಗೇನು ?

ಹೊರ ನಡೆದು ಬಾಗಿಲು ಬಡಿದು ಮುಚ್ಚಿಕೊಳ್ಳುತ್ತಾಳೆ. ಮಧ್ಯ ಚಿತ್ರದಲ್ಲಿ ಪೋಲೀಸ್‌ನವ ಮತ್ತು ರಿಚಿ ಬ್ರೂನೋನ ದೃಷ್ಟಿಮಟ್ಟದಿಂದ ಅಂದರೆ ಕೊಂಚ ಕೆಳ ಕೋನದಿಂದ ಕಾಣುತ್ತಾರೆ. ಅವರು ಕಿಟಕಿಯ ಕಡೆ ಚಲಿಸುತ್ತಾರೆ.

ಪೋಲೀಸ್ : ನೀನು ಸರಿಯಾಗಿ ಗುರುತು ಹಿಡೀತೀಯಾ ? ನಿನಗೆ ಗ್ಯಾರಂಟಿ ಇದೆಯಾ ? ತಪ್ಪು ತಿಳಿದಿದ್ದರೂ ಇರ ಬಹುದು. ನೋಡು.

ರಿಚಿ : ಇಲ್ಲ. ಖಂಡಿತವಾಗಿಯೂ ನಾನು ಗುರುತಿಸಿದೇನೆ.

ಪೋಲೀಸ್ : (ಈಗ ಆತ ಕಿಟಕಿಯ ಪಕ್ಕದಲ್ಲಿದ್ದಾನೆ) ಇಲ್ಲಿ ಬಾ.

ಇವರಿಬ್ಬರೂ ಮೇಲೆನಿಂದ ಕಿಟಕಿಯ ಹೊರಗೆ ನೋಡುತ್ತ ನಿಂತಿರುವುದನ್ನು ಕೆಮೆರಾ ರಸ್ತೆಯಿಂದ ಕೆಳಕೋನದಲ್ಲಿ ಕಾಣಿಸುತ್ತದೆ. ಅನಂತರ ಕಿಟಕಿಯಿಂದ ಕಾಣುವ ರಸ್ತೆಯ ಮೇಲುಕೋನದ ನೋಟ, ಕಳ್ಳನ ಸುತ್ತ ಹಲವು ಜನ ನಿಂತುಕೊಂಡಿದ್ದಾರೆ. ಎಲ್ಲರೂ ಮೇಲಕ್ಕೆ ತಲೆಯೆತ್ತಿ ನೋಡುತ್ತಿದ್ದಾರೆ.

ಪೋಲೀಸ್ : ನೋಡು....ಅಲ್ಲಿ ಸೇರಿರೋ ಅಷ್ಟೂ ಜನ ಅವನಿಗೆ ಸಾಕ್ಷಿ ಹೇಳ್ತಾರೆ.... ನಿನಗೆ ?

ಪುನಃ ಕೋಣೆಯ ಒಳಭಾಗ. ಇಬ್ಬರೂ ಮತ್ತೆ ಬ್ರೂನೋ ನಿಂತಲ್ಲಿಗೆ ಬರುತ್ತಾರೆ.

ಪೋಲೀಸ್ : ಪ್ರತಿದಿನ ಇಂಥದ್ದು ಒಂದಲ್ಲ ಒಂದು ಕೇಸ್ ಇರತ್ತೆ. ಸುಮ್ನೆ ಸಮಯ ಹಾಳಾಗತ್ತೆ ಅಷ್ಟೆ.... ಹೋಗಲಿ

ನೀನು ಅವನ ಮುಖ ಇಡಿಯಾಗಿ ನೋಡಿದೀಯಾ ?

ರಿಚಿ : ಹೌದು. ಅವನು ಕದ್ದುಕೊಂಡು ಓಡಿ ಹೋಗ್ತಿದ್ದಾಗ ನೋಡಿದ್ದೆ.

ಪೊಲೀಸ್ : ಹಿಂದಿನಿಂದ ?

ರಿಚಿ : ಊಹೂಂ, ಅವನನ್ನು ಇಡಿಯಾಗಿ ನೋಡೋಕೆ ಸಾಧ್ಯವಾಗಿತ್ತು ನಂಗೆ. ನಿಜವಾಗ಼್ೂ ಕಂಡಿದ್ದೆ.

ಪೊಲೀಸ್‌ನವ ಸ್ವಲ್ಪ ಅವಿಶ್ವಾಸದಿಂದಲೆಂಬಂತೆ ಕಿಟಕಿಯ ಹತ್ತಿರ ಹೋಗಿ ನಿಲ್ಲುತ್ತಾನೆ. ರಿಚಿ ಹೋಗಿ ಅವನಿಗೆದುರಾಗಿ ನಿಲ್ಲುತ್ತಾನೆ. ಮುನ್ನೆಲೆಯಲ್ಲಿ ಬ್ರೂನೋ ಅವರತ್ತ ನೋಡುತ್ತ ನಿಂತಿದ್ದಾನೆ. ಹಿನ್ನೆಲೆಯಲ್ಲಿ ರಸ್ತೆಯ ಆಚೆಯ ಮನೆಯೊಂದರಲ್ಲಿ ಮಗುವನ್ನು ಎತ್ತಿಕೊಂಡಿರುವ ಒಬ್ಬ ಮನುಷ್ಯ (ಹಿಂದೆ ನಮಗೆ ಕಂಡ 'ಪರಿಚಿತ') ಕಿಟಕಿಯ ಬಾಗಿಲು ಮುಚ್ಚುತ್ತಿರುವುದು ಕಾಣುತ್ತದೆ.

ಪೊಲೀಸ್ : ಕಳುವಾದಾಗ ಅಲ್ಲಿ ತುಂಬಾ ಜನ ಇದ್ರಾ ?

ರಿಚಿ : ಹೂಂ. ಇದ್ರು.

ಪೊಲೀಸ್ : ಸಾಕ್ಷಿ ಹೇಳೋಕೆ ಅವರ ಪೈಕಿ ಯಾರೊಬ್ಬರೂ ಸಿಕ್ಕಲ್ವಾ ನಿನಗೆ ?

ರಿಚಿ : ಆ ಗಡಿಬಿಡಿಯಲ್ಲಿ ಅವರೆನ್ನೆಲ್ಲ ಗುರುತಿಟ್ಟುಕೊಳ್ಳೋದಾದ್ರೂ ಹೇಗೆ ?

ಅವರು ಬಾಗಿಲ ಕಡೆ ನಡೆಯುತ್ತಾರೆ. ಪೊಲೀಸ್‌ನವ ತಾಯಿಗೆ ಒಳಬರುವಂತೆ ಸನ್ನೆ ಮಾಡುತ್ತಾನೆ. ಆಕೆ ಒಳಬರುತ್ತಾಳೆ. ಹೊರ ಹೊರಟ ಅವರು ಬಾಗಿಲು ದಾಟುತ್ತಿರುವಾಗ ಒಬ್ಬ ಯುವತಿ ಒಳಬರುತ್ತಾಳೆ. ಅಸ್ತವ್ಯಸ್ತವಾಗಿ ಬಟ್ಟೆ ಹಾಕಿಕೊಂಡಿರುವ ಆಕೆ ರಿಚಿಯತ್ತ ಅಸಹ್ಯದ ದೃಷ್ಟಿ ಬೀರುತ್ತಾಳೆ. ತಂದ ಪ್ಯಾಕೆಟ್‌ಗಳನ್ನು ಟೇಬಲ್ ಮೇಲೆ ಇಡುತ್ತಾಳೆ. ರಿಚಿ ಬ್ರೂನೋ ಮತ್ತು ಪೊಲೀಸ್‌ನವ ಹಿನ್ನೆಲೆಯಲ್ಲಿ ಹೊರ ಹೋಗುವುದು ಕಾಣುತ್ತದೆ. ಬಾಗಿಲು ಮುಚ್ಚಿಕೊಳ್ಳುತ್ತದೆ. ಕೆಳಕೋನದಿಂದ ಮೆಟ್ಟಿಲುಗಳು. ಪೊಲೀಸ್‌ನವ ಮುಂದೆ, ರಿಚಿ ಬ್ರೂನೋ ಹಿಂದೆ ಇಳಿಯುತ್ತಿದ್ದಾರೆ. ಪೊಲೀಸ್‌ನವ ಮಧ್ಯೆ ನಿಂತು ರಿಚಿಯತ್ತ ತಿರುಗುತ್ತಾನೆ.

ಪೊಲೀಸ್ : ಒಟ್ಟಿನಲ್ಲಿ ಹೇಳೋದಾದರೆ.... ನೀನು ಅವನ ಸರಿಯಾಗಿ ನೋಡಿಯೇ ಇಲ್ಲ.... ಮತ್ತೆ ನಿನಗೆ ಸಾಕ್ಷಿಗಳೂ ಇಲ್ಲ. ಆಮೇಲೇನಾದ್ರೂ ಅವನು ನಿರಪರಾಧಿಯೇ ಅಂತಾದ್ರೆ ನಿನಗೆ ಕಷ್ಟ. ಅಲ್ಲೆ ಹಿಡಿಯೋದಾದ್ರೆ ಅವನ್ನ ಕದಿಯೋವಾಗ಼್ೇ ಹಿಡಿಬೇಕಿತ್ತು. ಅಥವಾ ಸೈಕಲ್ ಅವನ

ಸ್ವಾಧೀನದಲ್ಲಿದೆ ಅಂತಾದ್ರೂ ಆಗಬೇಕು – ಈಗ ನೋಡು, ಏನೂ ಮಾಡೋಕೆ ಆಗಲ್ಲ.

ರಿಚಿ : ಹೋಗ್ಲಿ ಬಿಡಿ. ಆದ್ರೆ.... ನಾನು ಅವನ ಮುಖ ಜಜ್ಜಿ ಕೊಡ್ತೀನಿ.

**ಪೋಲೀಸ್** : (ಇಳಿಯುತ್ತ) ಹಾಗೆ ಮಾಡಿದ್ರೆ ನೀನು ಈಗ ನನ್ನ ಜತೆ ಬರಬೇಕಾಗತ್ತೆ ಅಷ್ಟೆ.

ರಿಚಿ : (ತನ್ನಷ್ಟಕ್ಕೇ ನಿಶ್ಚಲನಾಗಿ ಗೊಣಗಿಕೊಳ್ಳುತ್ತ) ಇದರಿಂದ ನನ್ನ ಪರಿಸ್ಥಿತಿ ಏನಾಗತ್ತೆ ಅಂತ ನಿಮಗೇನಾದ್ರೂ ಗೊತ್ತಿದ್ದಿದ್ರೆ....

ರಸ್ತೆಯ ಬಾಗಿಲಿಗೆ ಬಂದ ಪೋಲೀಸ್‌ನವನ ಮಧ್ಯ ಚಿತ್ರ.

**ಪೋಲೀಸ್** : (ಕಳ್ಳನಿಗೆ) ಏಯ್. ಬಾ. ಇಲ್ಲಿ.

ಕಳ್ಳ ಮತ್ತು ಅವನ ಕೆಲವು ಸ್ನೇಹಿತರು ಹತ್ತಿರ ಬರುತ್ತಾರೆ. ಪೋಲೀಸ್‌ನವ ತನ್ನ ನೋಟು ಪುಸ್ತಕ ಹೊರ ತೆಗೆಯುತ್ತಾನೆ. ರಿಚಿ ಆತನ ಹಿಂದೆ ನಿಂತಿದ್ದು ಅರ್ಧ ಮಾತ್ರ ಕಾಣಿಸುತಿದ್ದಾನೆ.

ಮತ್ತೊಬ್ಬ : (ರಿಚಿಗೆ) ಈಗ ಸಂತೋಷ, ಆಯ್ತಾ ? ಏನು ಸಿಗ್ತು ನಿಂಗೆ ? ....ಗೊತ್ತಾಯಲ್ಲ ....ಇನ್ನು ದಯ ಮಾಡಿಸು....

ಕಳ್ಳ : (ಪೋಲೀಸ್‌ನವನಿಗೆ) ನನ್ನ ನಂಬಿ. ನಾನು ನಿರಪರಾಧಿ.... ನಂಗೇನು ಗೊತ್ತಿಲ್ಲ. ದಯವಿಟ್ಟು ನಂಬಿ.

ಪೋಲೀಸ್ : ನಿನ್ನ ಹೆಸರೇನು ?

ಕಳ್ಳ : ಆಲ್‌ಫ್ರೆಡೋ ಕಟ್ಟೆಲ್ಲಿ. ನಾನು ಇಲ್ಲೇ ವಾಸ ಮಾಡೋದು. ಈಗ ಬೇಕಾದ್ರೆ ನಿಮ್ಮ ಜೊತೆ ಬರ್ತೀನಿ. ಏನಗೆ ಸ್ವಲ್ಪ ವಾಸಿಯಾಗಿದೆ.

ಪೋಲೀಸ್ : (ನೋಟ್ ಬರೆದು ಕೊಳ್ಳುತ್ತ, ರಿಚಿಗೆ) ಏನು ಇವನ ಮೇಲೆ ಆಪಾದನೆ ಹಾಕಬೇಕು ಅಂತೀಯಾ ?

ತಾಯಿ : (ಬಾಗಿಲಿನಿಂದ) ಇಲ್ಲಪ್ಪಾ........ ಅವನಿಗೇನೂ ಗೊತ್ತಿಲ್ಲಾ....ಏನೇನೂ ತಿಳೀದು ಅವನಿಗೆ.

ಇದ್ದಕ್ಕಿದ್ದಂತೆ ರಿಚಿ ಬ್ರೂನೋ ಕೈ ಹಿಡಿದು ಗುಂಪಿನಲ್ಲಿ ನುಗ್ಗಿ ಮುಂದೆ ನಡೆದು ಬಿಡುತ್ತಾನೆ. ಕೆಮೆರಾ ಗುಂಪಿನ ಮೇಲೆಯೇ ಇದೆ.

ಧ್ವನಿಗಳು : ಇದು ತೀರಾ ಆಯ್ತು ಹೂಂ. ಮೊದಲು

ಇಲ್ಲಿಂದ ಗಾಡಿ ಬಿಡು.... ಇನ್ನೇನಾದ್ರೂ ಸರಿ ಇರಬೇಕು ಅಂತಿದ್ರೆ ಈ ಕಡೆ ಕಾಲು ಹಾಕಬೇಡ.... ಸುಮ್ನ ಸುಮ್ನನೆ ಕಳ್ಳ ಅಂತ ಹೇಳಿಬಿಡೋದೂ ಅಂದ್ರೆ.

ಕಪ್ಪುಕನ್ನಡಕದವ : ಹಲ್ಕಾ ನನಮಗ. ಹೂಂ ಕಂಬಿಕೀಳಿನ್ನು.

ರಿಚಿ ರಸ್ತೆಯ ಒಂದು ತುದಿಯಲ್ಲಿ ಕೆಲವು ಜನಗಳ ಮಧ್ಯೆ ನುಗ್ಗಿಕೊಂಡು ನಡೆಯುತ್ತಿದ್ದಾನೆ. ಆತನ ಕೋಪದಲ್ಲಿ ಆತ ಬ್ರೂನೋನ ಕೈ ಬಿಟ್ಟಿದ್ದಾನೆ. ಕೆಮೆರಾಕ್ಕೆ ಬೆನ್ನಾಗಿ ಒಂಟಿಯಾಗಿ ನಡೆಯುತ್ತಿದ್ದಾನೆ. ಕೆಮೆರಾ ಅನುಸರಿಸುತ್ತಿದೆ.

ಧ್ವನಿಗಳು : (ಹೊರಗಿನ ಧ್ವನಿಗಳೊಡನೆ ಮಿಶ್ರವಾಗಿ ಕೇಳುತ್ತಿದೆ.) ಹೋಯ್. ನಿನ್ನ ಹೆಸರು ಏನು? ಈ ಜಾಗ ಯಾವತ್ತೂ ನೆನಪಿಟ್ಟುಕೊ.... ಹಂದಿ ನನಮಗನೇ....ಕಳ್ಳ ಸೂಳೇಮಗನೇ.... ನಮ್ಮನ್ನ ತಪ್ಪಿಸ್ಕೊಂಡು ಬದುಕ್ತೀ ಅಂತ ತಿಳಿಬೇಡ.

ರಿಚಿ ರಸ್ತೆಯ ಮೂಲೆಯಲ್ಲಿ ತಟ್ಟನೆ ನಿಂತು ಹಿಂದೆ ತಿರುಗುತ್ತಾನೆ. ಕೆಮೆರಾ ಆತನ ಕಡೆ ಧಾವಿಸಿ ಬರುತ್ತದೆ. ಗುಂಪು ಸ್ತಬ್ಧವಾಗುತ್ತದೆ. ಹಿಂದೆ ತಿರುಗಿ ರಿಚಿ ಒಂದು ಖಾಲಿ ರಸ್ತೆಯ ಕಡೆ ನಡೆಯುತ್ತಾನೆ. ರಿಚಿ ಕೆಮೆರಾದತ್ತ ನಡೆದು ಬರುತಾನೆ. ಫಕ್ಕನೆ ತಾನು ಒಬ್ಬನೇ ಇರುವುದು ಅರಿವಾಗಿ ನಿಲ್ಲುತ್ತಾನೆ. ಹಿಂದೆ ತಿರುಗಿ ಓಡುತ್ತಾನೆ.

ರಿಚಿ : ಬ್ರೂನೋ.... ಬಾ.... ಬಾ.

ಖಾಲಿ ರಸ್ತೆಯ ದೂರ ಚಿತ್ರ. ಬ್ರೂನೋ ಬಂದು ತಂದೆಯನ್ನು ಕೂಡಿಕೊಳ್ಳುತ್ತಾನೆ. ಅವನನ್ನು ಅನುಸರಿಸಿ ನಡೆಯುತ್ತಾನೆ. ಗುಂಪು ಕಿರಿಚುತ್ತ ಇನ್ನೂ ಸ್ವಲ್ಪದೂರ ಅವರನ್ನು ಹಿಂಬಾಲಿಸುತ್ತದೆ.

ತಂದೆ ಮತ್ತು ಮಗ ರಸ್ತೆಯುದ್ದಕ್ಕೆ ನಡೆಯುತ್ತಾರೆ.

ಕ್ಷಯ – ವರ್ಧನ

ಪರವಶನಾಗಿ ನಡೆಯುತ್ತಿರುವ ರಿಚಿ. ಆತನ ಮುಷ್ಟಿಗಳು ಬಿಗಿದುಕೊಂಡಿವೆ. ಬ್ರೂನೋ ಕಾತರದಿಂದ ತಂದೆಯತ್ತ ಪದೇಪದೇ ತಲೆಯೆತ್ತಿ ನೋಡುತ್ತಿದ್ದಾನೆ.

ಹಿನ್ನೆಲೆಯಲ್ಲಿ ವಸ್ತು ಸಂಗೀತ.

ದೊಡ್ಡ ಚೌಕವೊಂದರ ದೂರಚಿತ್ರ. ಬ್ರೂನೋಗೆ ತಂದೆಯ ಜತೆ ನಡೆಯುವುದು ಕಷ್ಟವಾಗಿದೆ. ಅವರು ಚೌಕಕ್ಕೆ ಬರುತ್ತಾರೆ. ಹಾದು ಹೋಗುತ್ತಿರುವ ಒಂದು ಕಾರ್ ಬ್ರೂನೋಗೆ ಡಿಕ್ಕಿ ಹೊಡೆಯುವುದು ಸ್ವಲ್ಪದರಲ್ಲಿ ತಪ್ಪುತ್ತದೆ. ಇದು ರಿಚಿಯ

ಗಮನಕ್ಕೇ ಬರುವುದಿಲ್ಲ. ಇನ್ನೊಂದು ಕಾರ್ ಬ್ರೂನೋನೆದುರು ಗಕ್ಕನೆ ಬ್ರೇಕ್‌ಹಾಕಿ ಹಾಕಿ ನಿಲ್ಲುತ್ತದೆ. ಅನಂತರ ದೀರ್ಘ ಸೋಪಾನಗಳ ದಾರಿಯಲ್ಲಿ ಅವರು ಇಳಿದು ಇಳಿದು ಮುಂದೆ ಸಾಗುತ್ತಿರುವುದು ಕಾಣುತ್ತದೆ.

ಕ್ಷಯ – ವರ್ಧನ

ಅವರು ಮುನಿಸಿಪಲ್ ಸ್ಟೇಡಿಯಂನತ್ತ ನಡೆಯುತ್ತಿದ್ದಾರೆ.

ವಸ್ತು ಸಂಗೀತ ಬದಲಾಗಿ ಕಾತರದ ಸಂಗೀತ ಪ್ರಾರಂಭವಾಗುತ್ತದೆ. ಅದು ಮುಂದಿನ ನಾಟಕೀಯ ಸನ್ನಿವೇಶಕ್ಕೆ ಹಿನ್ನೆಲೆಯಾಗುತ್ತದೆ.

ಬ್ರೂನೋ ಮತ್ತು ರಿಚಿ ಒಂದು ಬಸ್ ಸ್ಟಾಪಿನತ್ತ ನಡೆದು ಬರುತ್ತಿರುವ ಮಧ್ಯ ಚಿತ್ರ. ರಿಚಿ ನಿಲ್ಲುತ್ತಾನೆ. ಸುಸ್ತಾದ ಬ್ರೂನೋ ಅಲ್ಲೇ ಬದಿಗೆ ಕುಳಿತುಕೊಳ್ಳುತ್ತಾನೆ. ಮತ್ತೆ ರಿಚಿಯ ಮಧ್ಯ ಸಮೀಪ ಚಿತ್ರ. ಆತನ ಕಣ್ಣುಗಳು ಚೌಕದ ಹೊರಗೆಲ್ಲೋ ನೆಟ್ಟಿವೆ. ಒಂದು ಕ್ಷಣ ಆತನ ಕಣ್ಣುಗಳು ಮಿನುಗುತ್ತವೆ. ದೂರಚಿತ್ರದಲ್ಲಿ ಸ್ಟೇಡಿಯಂನ ಹೊರಗೆ ನಿಲ್ಲಿಸಿದ ಅಸಂಖ್ಯಾತ ಬೈಸಿಕಲ್‌ಗಳ ಸಾಲು ಸಾಲುಗಳು ಕಾಣುತ್ತವೆ.

ಸ್ಟೇಡಿಯಂನಿಂದ ಫುಟ್‌ಬಾಲ್ ಮ್ಯಾಚಿನ ಗದ್ದಲ.

ರಿಚಿ ಮುಖ ತಗ್ಗಿಸಿ ಬ್ರೂನೋನತ್ತ ನೋಡುತ್ತಾನೆ. ಬ್ರೂನೋ ತಲೆ ಕೆರೆದ ಕೊಳ್ಳುತ್ತಿದ್ದಾನೆ. ಮತ್ತೆ ಕೈಗಳನ್ನು ಜೇಬಿಗೆ ತುರುಕಿ ರಿಚಿ ಅತ್ತಿತ್ತ ಶತಪಥ ತಿರುಗುತ್ತಾನೆ. ಆತ ಉದ್ವೇಗಗೊಂಡಿರುವುದು ಕಾಣುತ್ತದೆ. ಆತನ ದೃಷ್ಟಿ ಮತ್ತೆ ಸ್ಟೇಡಿಯಂನ ಬಳಿ ಇರುವ ಸೈಕಲ್‌ಗಳತ್ತ ಹರಿಯುತ್ತದೆ. ಇನ್ನೊಂದು ಕಡೆಗೆ ನಿರುದ್ದಿಶವಾಗಿ ನಡೆಯುತ್ತಾನೆ. ಒಂದು ಚಿಕ್ಕ ರಸ್ತೆಯತ್ತ ನೋಡುತ್ತಾನೆ. ದೂರಚಿತ್ರದಲ್ಲಿ ಬಿಸಿಲು ಚೆಲ್ಲಿದ ಚಿಕ್ಕ ರಸ್ತೆ ಕಾಣುತ್ತದೆ. ಒಂದು ಕಟ್ಟಡದ ಬಾಗಿಲಿನ ಸಮೀಪ ಒಂದು ಬೈಸಿಕಲ್ಲನ್ನು ಗೋಡೆಗೆ ಒರಗಿಸಿ ಇಟ್ಟಿದ್ದಾರೆ. ಯಾರೂ ಅಲ್ಲಿ ಕಾಣುತ್ತಿಲ್ಲ. ರಿಚಿಯ ಸಮೀಪ ಚಿತ್ರ. ಆತ ಏನೋ ಲೆಕ್ಕ ಹಾಕುತ್ತಾನೆ. ಕೆಮೆರಾ ಲಾಳ ತಿರುಗುತ್ತದೆ. ರಿಚಿ ಬ್ರೂನೋನ ಪಕ್ಕಕ್ಕೆ ಹೋಗಿ ಕೂತುಕೊಳ್ಳುತ್ತಾನೆ. ಬ್ರೂನೋ ಅವನತ್ತ ಆಶ್ಚರ್ಯದಿಂದ ನೋಡುತ್ತಾನೆ. ರಿಚಿ ತೀರಾ ಸೋತವನಂತೆ ತಲೆಕೆಳಗೆ ಹಾಕುತ್ತಾನೆ. ಮೌನವಾಗಿದ್ದಾನೆ. ನಿಶ್ಚಲನಾಗಿದ್ದಾನೆ.

ಸ್ಟೇಡಿಯಂನ ಗದ್ದಲ.

ರಿಚಿ ತಲೆಯೆತ್ತಿ ನೋಡುತ್ತಾನೆ. ದೂರಚಿತ್ರದಲ್ಲಿ ಸ್ಟೇಡಿಯಂ. ಮತ್ತೆ ತಂದೆ ಮಕ್ಕಳ ಚಿತ್ರ. ಉದ್ವೇಗದಿಂದ ರಿಚಿ ಕಣ್ಣು ಮುಖ ಉಜ್ಜಿಕೊಳ್ಳುತ್ತಿದ್ದಾನೆ. ಮುನ್ನೆಲೆಯಲ್ಲಿ

ಸೈಕಲ್ ಸವಾರರ ಒಂದು ಸಾಲು ರಸ್ತೆಯಲ್ಲಿ ಸ್ಪರ್ಧೆಯಿಂದ ಸೈಕಲ್ ಹೊಡೆದು ಕೊಂಡು ಹೋಗುತ್ತದೆ. ಅವರನ್ನು ಕಂಡು ರಿಚಿ ಪ್ರಚೋದಿತನಾಗುತ್ತಾನೆ. ಅವರ ಗುಪು ಹಾದು ಹೋದ ಮೇಲೆ ತಟ್ಟನೆ ರಿಚಿ ಮೇಲೇಳುತ್ತಾನೆ. ಸ್ಟೇಡಿಯಂ ಕಡೆ ನೋಡುತ್ತಾನೆ. ದೂರಚಿತ್ರದಲ್ಲಿ ಸ್ಟೇಡಿಯಂ. ತಟ್ಟನೆ ರಿಚಿಯು ಮತ್ತು ನಿಲ್ಲಿಸಿದ ಸೈಕಲ್ಲಿನ ಚಿತ್ರಿಕೆಗಳು ಶೀಘ್ರಗತಿಯಲ್ಲಿ ಮರುಕಳಿಸುತ್ತವೆ. ರಿಚಿ ; ನಿಲ್ಲಿಸಿದ ಸೈಕಲ್ ಗಳು; ಮತ್ತೆ ಪಕ್ಕದ ರಸ್ತೆಯಲ್ಲಿ ಹಾದುಹೋಗುತ್ತಿರುವ ಕೆಲವರು.

ರಿಚಿ ಮತ್ತು ಆ ಚೌಕ ಏರಡೂ ಕಾಣುವ ದೂರಚಿತ್ರ. ರಿಚಿ ಮತ್ತೆ ಆ ಅಡ್ಡರಸ್ತೆಗೆ ಹೋಗಿ ಆ ಸೈಕಲ್ ಇನ್ನೂ ನಿಂತಿರುವುದನ್ನು ಗಮನಿಸುತ್ತಾನೆ. ಮತ್ತೆ ಗೋಡೆ ಗೊರಗಿ ನಿಲ್ಲುತ್ತಾನೆ. ಪುನಃ ಬ್ರೂನೋ. ಆತ ಇನ್ನೂ ಕೂತೇ ಇದ್ದಾನೆ. ಆತ ತಂದೆಯ ವಿಚಿತ್ರ ಚಲನಗಳನ್ನು ಗಮನಿಸುತ್ತಿದ್ದಾನೆ. ರಿಚಿಯ ಮಧ್ಯ ಸಮೀಪಚಿತ್ರ. ಆತ ಬೆವರಿದ್ದಾನೆ. ದೂರ ಚಿತ್ರದಲ್ಲಿ ಮತ್ತೆ ಸ್ಟೇಡಿಯಂ ಮತ್ತು ಸೈಕಲ್‌ಗಳ ಸಾಲು ಸಾಲು. ಸ್ಟೇಡಿಯಂನ ಬಾಗಿಲು ತೆರೆಯುತ್ತದೆ. ಜನ ಸ್ಟೇಡಿಯಂನಿಂದ ಹೊರಡುತ್ತಿದ್ದಾರೆ. ಕೆಲವು ಯುವಕರು ಸೈಕಲ್ ಹತ್ತಿ ಹೊರಡುತ್ತಾರೆ. ರಿಚಿಯನ್ನು ಕೆಮೆರಾ ಅನುಸರಿಸುತ್ತಿದೆ. ರಿಚಿ ಹ್ಯಾಟ್ ತೆಗೆಯುತ್ತಾನೆ. ಯೋಚನಾಮಗ್ನನಾಗಿ ಕೂದಲಿನಲ್ಲಿ ಕೈಯಾಡಿಸುತ್ತಾನೆ. ಬ್ರೂನೋನತ್ತ ಹೋಗುತ್ತಾನೆ. ಜೇಬಿನಿಂದ ಕೆಲವು ನಾಣ್ಯಗಳನ್ನು ತೆಗೆದು ಬ್ರೂನೋಗೆ ಕೊಡುತ್ತಾನೆ.

ರಿಚಿ : ಬ್ರೂನೋ ಇಲ್ನೋಡು.... ಮಾನ್ತೇಸ್ಯಾಕ್ರೋಗೆ ಹೋಗು. ಅಲ್ಲಿ ನನ್ನ ಕಾಯ್ತಿರು.

ಬ್ರೂನೋ (ಗೊಂದಲಗೊಂಡು) ಎಲ್ಲಿ ?

ರಿಚಿ : (ಅವನನ್ನು ದೂಡುತ್ತ) ಬಾ.... ಹೂಂ.... ಬಾ. ಹೇಳಿದ ಹಾಗೆ ಮಾಡು.... ಓಡು.... ಅಲ್ನೋಡು ಟ್ರಾಂ ನಿಂತಿದೆ.

ಬ್ರೂನೋ ರಸ್ತೆಯನ್ನು ದಾಟುತ್ತಾನೆ. ರಿಚಿ ಸೈಕಲ್ ನಿಂತ ಪಕ್ಕದ ರಸ್ತೆಯತ್ತ ನಡೆಯುತ್ತಿರುವಂತೆ ಕೆಮೆರಾ ಅನುಸರಿಸುತ್ತದೆ. ಬ್ರೂನೋ ನಿಂತ ಟ್ರಾಂ ನತ್ತ ಓಡುತ್ತಾನೆ.

ಟ್ರಾಂ ಗಂಟೆ ಬಾರಿಸುತ್ತದೆ.

ಬ್ರೂನೋ ಹೋಗಿ ಸೇರಿಕೊಳ್ಳುವಷ್ಟರಲ್ಲಿ ಟ್ರಾಂ ಬಾಗಿಲು ಮುಚ್ಚಿಕೊಳ್ಳುತ್ತದೆ. ಆತ ನಿಂತು ತನ್ನನ್ನು ಬಿಟ್ಟುಹೋದ ಟ್ರಾಂನತ್ತ ನೋಡುತ್ತಾನೆ.

ಮತ್ತೆ ಪಕ್ಕದ ರಸ್ತೆಯ ದೂರ ಚಿತ್ರ. ರಿಚಿ ಹೊರಗೆ ಶಾಂತನಾಗಿರುವಂತೆ ತೋರಿಸಿಕೊಳ್ಳುತ್ತಾ ಕೆಮೆರಾದತ್ತ ಬರುತ್ತಿದ್ದಾನೆ. ಬೇರೆಯೊಂದು ಸೈಕಲ್ ಹಾದು ಬರುವಾಗ

ಅದರತ್ತ ಕಳ್ಳನೋಟ ಬೀರುತ್ತಾನೆ. ಗೋಡೆಗೊರಸಿದ ಸೈಕಲ್‌ಗಿಂತ ಸುಮಾರು ಇಪ್ಪತ್ತು ಅಡಿ ಮುಂದೆ ನಿಲ್ಲುತ್ತಾನೆ. ತಿರುಗುತ್ತಾನೆ. ಓಡಿ ಬಂದು ಸೈಕಲ್‌ನ್ನು ಜಿಗಿದು ಏರುತ್ತಾನೆ. ಉದ್ರೇಕದಿಂದ ಪೆಡಲ್ ತುಳಿಯತೊಡಗುತ್ತಾನೆ. ತಟ್ಟನೆ ಆ ಸೈಕಲ್ ನಿಂತ ಗೋಡೆಯ ಪಕ್ಕದಿಂದ ಒಬ್ಬ ವ್ಯಕ್ತಿ ದಾವಿಸಿ ಬರುತ್ತಾನೆ.

ಸೈಕಲ್‌ನವ : (ಕೂಗುತ್ತ) ಕಳ್ಳ....ಕಳ್ಳ....ಸಿಲ್ಸಿ ಅವನನ್ನು ....ಕಳ್ಳ... ಹಿಡೀರಿ ಅವನನ್ನ....

ರಸ್ತೆಯ ದೂರಚಿತ್ರ. ರಿಚಿ ತನ್ನ ಕೈಲಾದಷ್ಟು ವೇಗವಾಗಿ ಬೈಸಿಕಲ್ ತುಳಿಯುತ್ತ ಪಕ್ಕದ ರಸ್ತೆಗೆ ತಿರುಗಿಕೊಳ್ಳುತ್ತಾನೆ. ಸೈಕಲ್‌ನವನ ಕೂಗು ಕೇಳಿ ಕೆಲವರು ರಿಚಿಯನ್ನು ಹಿಂಬಾಲಿಸುತ್ತಾರೆ. ಅನಂತರ ಮೆಲುಕೋನದಿಂದ ರಿಚಿ ಸೈಕಲ್ ಹೊಡೆಯುತ್ತಿರುವ ದೀರ್ಘಚಿತ್ರ. ಚೌಕಕ್ಕೆ ಬಂದ ರಿಚಿಗೆ ಗಲಿಬಿಲಿಯಾಗುತ್ತದೆ. ಒಂದು ಟ್ರಾಂ ಹಾದು ಹೋಗುತ್ತದೆ.

ಹಿಂಬಾಲಿಸಿದ ಜನ : ಕಳ್ಳ.... ಕಳ್ಳ ... ಹಿಡೀರಿ ಅವನ್ನ....

ಮತ್ತೊಂದು ರಸ್ತೆಯ ದೃಶ್ಯ. ಓಡಿ ಬರುತ್ತಿರುವ ಅನೇಕ ಯುವಕರ ಧಾವಂತಕ್ಕೆ ರಿಚಿ ಸಮೀಪವಾಗುತ್ತಿದ್ದಾನೆ.

ಜನ ಕೂಗುತ್ತಿದ್ದಾರೆ.

ಹಿಂಬಾಲಿಸುವ ಜನ : ಕಳ್ಳ....ಕಳ್ಳ....ಹಿಡೀರಿ....

ಮಧ್ಯ ಚಿತ್ರದಲ್ಲಿ ಬ್ರೂನೋ. ಕೂಗುಗಳನ್ನು ಕೇಳಿ ಆತ ತಿರುಗುತ್ತಾನೆ. ಧಾವಿಸುತ್ತಿರುವ ತಂದೆಯನ್ನು ನೋಡುತ್ತಾನೆ. ಆತನಿಗೆ ಆಶ್ಚರ್ಯವಾಗಿದೆ. ಆಘಾತವಾಗುತ್ತದೆ. ತೀವ್ರ ಬೇಸರಗೊಂಡಿದ್ದಾನೆ.

ಅನಂತರದ ದೂರಚಿತ್ರ. ರಿಚಿ ಸ್ಟೇಡಿಯಂ ಕಡೆ ಸೈಕಲ್ ತುಳಿಯುತ್ತಿದ್ದಾನೆ. ಹಿಂಬಾಲಿಸುವವರಲ್ಲಿ ಒಬ್ಬ ಅವನನ್ನು ಸಮೀಪಿಸಿ ಅವನ ಕೋಟಿನ ತುದಿ ಹಿಡಿದುಕೊಳ್ಳುತ್ತಾನೆ. ಆಯ ತಪ್ಪಿ ರಿಚಿ ಕೆಳಗೆ ಬೀಳುತ್ತಾನೆ. ಅವನ ಮೈಮೇಲೆ ಸೈಕಲ್ ಬೀಳುತ್ತದೆ. ಗುಂಪು ಮುಂದಕ್ಕೆ ಧಾವಿಸಿ ಅವನನ್ನು ಸುತ್ತುವರೆಯುತ್ತದೆ. ಬ್ರೂನೋ ಭಯೋದ್ರೇಕದಿಂದ ತಂದೆಯ ಕಡೆ ಓಡುವ ಮಧ್ಯ ಸಮೀಪ ಚಿತ್ರ. ರಿಚಿಯ ಸುತ್ತ ಕವಿದುಕೊಂಡಿರುವ ಗುಂಪಿನ ದೂರ ಚಿತ್ರ. ರಿಚಿ ಈಗ ಮೇಲಕ್ಕೆದ್ದಿದ್ದಾನೆ. ಜನರ ಬಡಿತ ಅವಹೇಳನಗಳಿಂದ ತನ್ನನ್ನು ಮುಚ್ಚಿಕೊಳ್ಳಲು ಹೆಣಗುತ್ತಿದ್ದಾನೆ.

ಧ್ವನಿಗಳು : ಕಳ್ಳ....ಕಳ್ಳ....ಕ್ರಿಮಿನಲ್....

ಸೈಕಲ್‌ನ ಯಜಮಾನ ತನ್ನ ಸೈಕಲ್ ತಳ್ಳಿಕೊಂಡು ಗುಂಪಿನ ಹೊರಗೆ ಬರುತ್ತಾನೆ. ಸೈಕಲ್ ಅಲ್ಲಿಟ್ಟು ಗುಂಪಿನ ಒಳಗೆ ಜಗಳವಾಗುತ್ತಿದ್ದಲ್ಲಿಗೆ ನುಗ್ಗುತ್ತಾನೆ. ಸೈಕಲ್ ಯಜಮಾನ ಮತ್ತು ಮೂವರು ರಿಚಿಯನ್ನು ಹಿಡಿದುಕೊಂಡಿರುವುದರ ಮಧ್ಯ ಸಮೀಪ ಚಿತ್ರ. ಜನ ಸೇರುತ್ತಾರೆ. ಗುಂಪು ಬೆಳೆಯುತ್ತಿದೆ.

ಸೈಕಲ್ ಯಜಮಾನ : (ಕೋಪದಿಂದ ಉಸಿರುಕಟ್ಟಿ) ಸೂಳೇ ಮಗನೇ.... ದರೋಡೆ ಮಾಡ್ತೀಯಾ ? ....ಕಲಿಸ್ತೀನಿ ನಿಂಗೆ ಬುದ್ಧಿ.

ಜನ : ಕಳ್ಳ.... ಕಲ್ಸಬೇಕು ಸರೀ ಪಾಠ.

ಅವರಲ್ಲೊಬ್ಬ ರಿಚಿಯನ್ನು ತಳ್ಳುತ್ತಾನೆ.

ಸೈಕಲ್ ಯಜಮಾನ : ಮುಖ ಹೇಡಿ.... ಕೇಡಿ....

ಜನ : ಜೈಲಿಗೆ ಹಾಕಿಸ್ಬೇಕು.... ಆಗ್ಲೇ ಬುದ್ಧಿ ಬರೋದು ಒಡ್ಡ ಮಗನಿಗೆ....

ಅವರೆಲ್ಲಾ ಅವನಿಗೆ ಹೊಡೆಯುತ್ತಿದ್ದಂತೆ ಅವನ ಹ್ಯಾಟ್ ಕೆಳಗೆ ಬೀಳುತ್ತದೆ. ಮಧ್ಯ ಸಮೀಪ ಚಿತ್ರದಲ್ಲಿ ತನ್ನ ತಂದೆಯತ್ತ ನುಗ್ಗಲು ಯತ್ನಿಸುತ್ತಿರುವ ಬ್ರೂನೋ ಕಾಣುತ್ತಾನೆ.

ಬ್ರೂನೋ : ಪಪಾ.... ಪಪಾ

ಹೊಳೆಯುವ ಮುಖಗಳ ಮಧ್ಯೆ ರಿಚಿ ಸಿಕ್ಕಿಕೊಂಡ ಮಧ್ಯ ಸಮೀಪ ಚಿತ್ರ. ಏಕಕಾಲ ದಲ್ಲಿ ಎಲ್ಲರೂ ಕಿರುಚುತ್ತಿದ್ದಾರೆ. ರಿಚಿ ಸರ್ವನಾಶವಾದವನಂತೆ ನಿಂತಿದ್ದಾನೆ. ತನ್ನನ್ನು ರಕ್ಷಿಸಿಕೊಳ್ಳುವ ಪರಿವೆ ಕೂಡ ಅವನಿಗಿಲ್ಲ. ಮೇಲುಕೋನದಿಂದ ಕಾಣುವ ದೂರ ಚಿತ್ರ. ಒಂದು ಟ್ರಾಂ ಬರುತ್ತಿದೆ. ಜನರ ಗುಂಪು ಬದಿಗೆ ಸರಿಯುತ್ತದೆ. ಇಬ್ಬರು ರಿಚಿಯನ್ನು ಮುಂದೆ ತಳ್ಳುತ್ತಾರೆ. ಬ್ರೂನೋ ಟ್ರಾಂ ಹಳಿಗಳ ಬುಡದಲ್ಲಿ ಒಬ್ಬಂಟಿ ಯಾಗಿ ನಿಂತಿದ್ದಾನೆ. ಈಗ ಗುಂಪಿನ ಕೆಲವರು ತಮ್ಮ ಕೆಲಸಕ್ಕೆ ಹಿಂದಿರುಗುತ್ತಿದ್ದಾರೆ. ರಿಚಿಯನ್ನು ಎಳೆದು ಕರೆದೊಯ್ಯುತ್ತಿದ್ದಾರೆ. ಬ್ರೂನೋ ಅಲ್ಲೇ ಬಿದ್ದಿರುವ ರಿಚಿಯ ಹ್ಯಾಟನ್ನು ಎತ್ತಿಕೊಳ್ಳುತ್ತಾನೆ. ಅದರ ಧೂಳು ಕೊಡವುತ್ತಾನೆ. ಕೆಮೆರಾದತ್ತ ನಡೆಯುತ್ತಾನೆ. ಮುಖದಲ್ಲಿ ಕಣ್ಣೀರು ಹರಿಯುತ್ತಿದೆ. ರಿಚಿ ಮತ್ತು ಆತನನ್ನು ಹಿಡಿದ ಇಬ್ಬರು ಚಲಿಸಿದಂತೆ ಕೆಮೆರಾ ಲಾಳ ಅನುಸರಿಸುತ್ತದೆ. ಅವರ ಹಿಂದೆ ಸೈಕಲ್ ಯಜಮಾನ ಮತ್ತು ನಾಲ್ಕೈದು ಜನ.

ಒಬ್ಬ : ಎಲ್ಲಿಗೆ ಕರಕೊಂಡು ಹೋಗ್ಗೋಣ ?

ಸೈ. ಯಜಮಾನ : ಇಲ್ಲೇ ಒಂದು ಸ್ಟೇಷನ್ ಇದೆ.

ಒಬ್ಬ : (ಹೊರಗಿಂದ) ನಾವೆಲ್ಲ ಹೋಗೋದು ಬೇಡ. ಯಜಮಾನ ಮತ್ತಿಬ್ಬರು ಸಾಕ್ಷಿ ಹೋದರೆ ಸಾಕು.

ಬ್ರೂನೋ ಓಡಿಬರುತ್ತಾನೆ. ತಂದೆಯ ಕಾಲುಗಳನ್ನು ಒರಗಿ ಹಿಡಿದುಕೊಳ್ಳುತ್ತಾನೆ. ಅವರೆಲ್ಲ ನಿಲ್ಲುತ್ತಾರೆ.

ವಸ್ತು ಸಂಗೀತ ಪ್ರಾರಂಭವಾಗುತ್ತದೆ.

ಬ್ರೂನೋ ಗುಂಪಿನತ್ತ ಕೋಪದಿಂದ ನೋಡುತ್ತಾನೆ. ಮಧ್ಯ ಸಮೀಪ ಚಿತ್ರದಲ್ಲಿ

ರಿಚಿ ತಲೆತಗ್ಗಿಸಿ ಮಗನತ್ತ ನೋಡುತ್ತಿದ್ದಾನೆ. ಕೆಮೆರಾ ಕೆಳಕ್ಕೆ ಬಾಗಿದಂತೆ ಬ್ರೂನೋ ತಂದೆಯನ್ನು ನೋಡುತ್ತಿರುವುದು ಕಾಣುತ್ತದೆ. ಸೈಕಲ್ ಯಜಮಾನ ತಂದೆ-ಮಕ್ಕಳನ್ನು ನೋಡುತ್ತಿದ್ದಾನೆ. ಆತನಿಗೆ ಇವೆಲ್ಲ ಸಾಕೆನಿಸಿದಂತಿದೆ.

ಸೈ. ಯಜಮಾನ : ಹೋಗಲಿ ಬಿಡಿ, ಯಾರಿಗ್ಯಾಕೆ ತೊಂದರೆ ಕೊಡೋದು.

ರಿಚಿ ಸಮೀಪ ಚಿತ್ರದಲ್ಲಿ.

ಸೈ. ಯಜಮಾನ : ಎಲ್ಲ ಮರೆತು ಬಿಡೋಣ.

ಒಬ್ಬ : (ಹೊರಗಿಂದ) ನೀವು ಅವನ್ನ ಜೈಲಿಗೆ ಹಾಕಿಸಬೇಕು.

ಸೈ. ಯಜಮಾನ : ಹೋಗಲಿ ಬಿಡಿ ಸುಮ್ಮನೆ ಎಲ್ಲರಿಗೂ ತೊಂದರೆ. ನಿಮಗೆಲ್ಲ ಥ್ಯಾಂಕ್ಸ್.

ಸೈಕಲ್ ಯಜಮಾನ ಚೌಕಟ್ಟಿನ ಹೊರಗೆ ಚಲಿಸುತ್ತಾನೆ. ಬ್ರೂನೋ ಕಣ್ಣೊರಸಿ ಕೊಳ್ಳುತ್ತಿದ್ದಾನೆ.

ಒಬ್ಬ : (ಹೊರಗಿಂದ) ಇದೇ ಬುದ್ಧಿ ಮಗನಿಗೂ ಕಲಿಸ್ಬೇಕು.

ಈಗ ಉಳಿದಿರುವ ಚಿಕ್ಕಗುಂಪಿನ ಮಧ್ಯ ಚಿತ್ರ.

ಒಬ್ಬ : ನನ್ನ ಕೈಗೆ ಸಿಕ್ಕಲ್ಲಿಲ್ಲ ನೀನು. ನಿನ್ನ ಅದೃಷ್ಟ. ನಾನಾಗಿದ್ರೆ ಕಾಣಿಸ್ತಿದ್ದೆ. ಹೂ ಹೊರಡು.

ಆತ ರಿಚಿಯನ್ನು ದೂಡುತ್ತಾನೆ. ಜತೆಯಲ್ಲಿ ಇನ್ನೊಬ್ಬನೂ ದೂಡಲು ಕೈ ಕೊಡುತ್ತಾನೆ.

ಇನ್ನೊಬ್ಬ : ಅಂತೂ ಬಚಾವಾದೆಯಲ್ಲ .... ದೇವರಿಗೆ ನಮಸ್ಕಾರ ಮಾಡು.... ನಡಿ....

ಬ್ರೂನೋ ಮತ್ತು ರಿಚಿ ಆ ಪಾರ್ಕಿಂಗ್ ಜಾಗದಿಂದ ಹೊರಡುತ್ತಿದ್ದಂತೆ ಕೆಮೆರಾ ನಿಧಾನ ಅನುಸರಿಸುತ್ತದೆ.

ಅಸ್ಪಷ್ಟವಾದ ನಿಂದನೆ, ಹೀಯಾಳಿಕೆಯ ಕೂಗುಗಳು ಅವರನ್ನು ಹಿಂಬಾಲಿಸುತ್ತವೆ.

ಯಥಾವತ್ ಭಾನುವಾರದ ಮಧ್ಯಾಹ್ನದ ವಾತಾವರಣ. ರಸ್ತೆ ತುಂಬ ಜನ. ಬ್ರೂನೋ ಎಚ್ಚರದಿಂದ ತಂದೆಗೆ ಹ್ಯಾಟ್ ಎತ್ತಿ ಕೊಡುತ್ತಾನೆ. ರಿಚಿ ಅದನ್ನು ತೆಗೆದುಕೊಳ್ಳುತ್ತಾನೆ. ಕೂದಲು ಸರಿಪಡಿಸಿ ಕೊಳ್ಳುತ್ತಾನೆ. ನಡೆಯುತ್ತಿದ್ದಾನೆ. ಕೆಮೆರಾ ಅವನ ಮುಂದೆ ಅನುಸರಿಸುತ್ತ ಹಿಂದೆ ಸರಿಯುತ್ತಿದೆ. ಅವನ ಹಲ್ಲು ಕಚ್ಚಿದೆ. ಕಣ್ಣುಗಳು ಶೂನ್ಯವಾಗಿವೆ. ಭುಜ ಜೋಲು ಬಿದ್ದಿದೆ. ಮತ್ತೆ ಬ್ರೂನೋ ಮಧ್ಯ ಸಮೀಪ ಚಿತ್ರ. ಆತ ತನ್ನ ತಂದೆಯ ಕಾಲುಗಳನ್ನು ಅಪ್ಪಿಕೊಂಡಿದ್ದಾನೆ. ಆಗಾಗ ಉಕ್ಕುವ ಒಂದೊಂದು ಕಣ್ಣೀರ ಹನಿಯನ್ನು ಒರೆಸಿಕೊಳ್ಳುತ್ತಿದ್ದಾನೆ. ಇಬ್ಬರೂ ಗುಂಪಿನಲ್ಲಿ

ನಡೆದು ಹೋಗುತ್ತಿದ್ದಾರೆ. ಮೊಡೆನಾ ಟೀಮನ್ನು ಪ್ರೋತ್ಸಾಹಿಸುವವರ ಲಾರಿ ಹಾದುಹೋಗುತ್ತದೆ. ಬ್ರೂನೋ ಮತ್ತು ರಿಚಿ ನಡೆಯುತ್ತ ಹೋಗುತ್ತಿರುವ ಚಿತ್ರಿಕೆಗಳು....

ಮಧ್ಯ ಸಮೀಪ ಚಿತ್ರದಲ್ಲಿ ಕೆಮೆರಾ ರಿಚಿಯನ್ನನುಸರಿಸುತ್ತಿದೆ. ಹೇಗೋ ಪ್ರಯಾಸ ದಿಂದ ಆತ ನಡೆಯುತ್ತಿರುವಂತಿದೆ. ಕೆಮೆರಾ ಕೆಳಕ್ಕೆ ಬಾಗಿ, ತಲೆಎತ್ತಿ ತಂದೆಯತ್ತ ನೋಡುತ್ತಿರುವ ಬ್ರೂನೋನನ್ನು ಕಾಣಿಸುತ್ತದೆ. ಆತ ತುಂಬ ಬೇಸರಗೊಂಡಿದ್ದಾನೆ. ತಾನು ಏನೂ ಮಾಡದಿರುವುದಕ್ಕೆ ಮುಜಗರ ಪಟ್ಟಿದ್ದಾನೆ. ಕೆಮೆರಾ ಮುಖವೆತ್ತಿದಾಗ ರಿಚಿ ಮುಖ ತಗ್ಗಿಸಿದ್ದಾನೆ. ತುಟಿಗಳು ಕಂಪಿಸುತ್ತಿವೆ. ತುಂಬಿ ಬಂದ ಕಣ್ಣೀರನ್ನು ಆತ ಹೇಗೋ ತಡೆದು ಕೊಂಡಿದ್ದಾನೆ. ತಪ್ಪು ಹೆಜ್ಜೆ ಹಾಕುತ್ತ ನಡೆಯುತ್ತಿದ್ದಾನೆ. ಬ್ರೂನೋ ಮುಖವೆತ್ತಿ ತಂದೆಯತ್ತ ನೋಡುತ್ತಾ ಹೆಜ್ಜೆ ಹಾಕುತ್ತಿದ್ದಾನೆ. ಅತ್ಯಂತ ಸಮೀಪ ಚಿತ್ರದಲ್ಲಿ ಬ್ರೂನೋನ ಕೈ ರಿಚಿಯ ಕೈಯೊಳಗೆ ಸೇರಿ ಹಿಡಿದುಕೊಳ್ಳುತ್ತದೆ. ರಿಚಿ ಅದನ್ನು ಮುತ್ತಿಡಬೇಕೋ ಸರಿಸಿ ಹಾಕಬೇಕೋ ತಿಳಿಯದಂತೆ ನೋಡುತ್ತಿದ್ದಾನೆ. ರಿಚಿ ಅಳುತ್ತಿದ್ದಾನೆ. ಅವರಿಬ್ಬರ ಪರಸ್ಪರ ಬಿಗಿದುಕೊಂಡ ಕೈಗಳ ಅತ್ಯಂತ ಸಮೀಪ ಚಿತ್ರ.

ವಸ್ತು ಸಂಗೀತದ ಉಬ್ಬರ ಮೊಳಗಿ ಮೊಗಚುವಂತೆ ಕೇಳುತ್ತದೆ. ಅವರಿಬ್ಬರ ಹಿಂದುಗಡೆಯಿಂದ ಕಾಣುವ ದೂರ ಚಿತ್ರ. ಕ್ರಮೇಣ ತಂದೆಮಗ ಮುಂದಕ್ಕೆ ನಡೆಯುತ್ತ ದಾರಿಗರ ಜತೆ ಸೇರುತ್ತಾರೆ. ಮುಂದೆ ಮುಂದೆ ನಡೆದಂತೆ ಗುಂಪಿನೊಳಗೆ ಸೇರುತ್ತ ಸೇರುತ್ತ ಮಾಯವಾಗುತ್ತಾರೆ. ತುದಿಗೆ ಬರೀ ಗುಂಪುಮಾತ್ರ ಕಾಣುತ್ತದೆ. ಚಿತ್ರಿಕೆಯ ಮೇಲೆ ಅಂತ್ಯ ಶೀರ್ಷಿಕೆ ಮೂಡಿಕೊಳ್ಳುತ್ತದೆ.



ವಿಟ್ಟೋರಿಯೊ ಡಿ ಸಿಕಾ (1902–1975) ನಿರ್ಮಿಸಿದ 'ಬೈಸಿಕಲ್ ಥೀವ್ಸ್' ಜಗತ್ತಿನ ಚಲನಚಿತ್ರದ ಇತಿಹಾಸಕ್ಕೇ ಒಂದು ಚಿಕ್ಕ ತಿರುವು ತಂದುಕೊಟ್ಟಿತು. 'ಬೈಸಿಕಲ್ ಥೀವ್ಸ್'ನಲ್ಲಿ ಹಸಿ ವಾಸ್ತವತೆಯಿದ್ದರೂ ಈ ಚಿತ್ರ ವಾಸ್ತವದ ಚಿತ್ರ ವರದಿಯಷ್ಟೇ ಆಗಿಬಿಡದೆ ಗಹನವಾದ ಅನುಭವ ಮೂಲವಾಗುವುದು, ಇದರ ಹಿಂದಿರುವ ಆಳವಾದ ಮಾನವೀಯ ಪ್ರೇಮದಿಂದ. ರಸ್ತೆಯ ಜನಸಂದಣಿಯಲ್ಲಿ ಪ್ರತ್ಯೇಕ ಚಹರೆಯೇ ಇಲ್ಲವೇನೋ ಎನ್ನುವ ಹಾಗೆ ಬೆರೆತುಹೋಗುವ ಆಂಟೋನಿಯೋನಂಥವನು ನಮ್ಮ ಆಸಕ್ತಿಯನ್ನು ಸೆಳೆದು, ನಮ್ಮೆದುರು ತನ್ನ ಬದುಕನ್ನು ತೆರೆದುಕೊಳ್ಳುವುದು ಇಂಥ ಗಾಢಪ್ರೀತಿ ಆಸಕ್ತಿಗಳಿಂದ ಮಾತ್ರವೇ ಸಾಧ್ಯವಾಗಿದೆ. ಬಡತನದ ಬವಣೆಯಲ್ಲಿ ಸಿಕ್ಕು ದಿಕ್ಕುಗೆಟ್ಟು ಮೂರ್ಖರಾಗುವ, ಮೂಢರಾಗುವ, ಹಗಲುಗನಸಿನ ಟೊಳ್ಳುಗಳಾಗುವ, ಅನೀತಿವಂತರಾಗುವ, ಅಪರಾಧಿಗಳಾಗುವ, ಹಿಂಸ್ರರಾಗುವ ಈ ಜನರನ್ನು, ಭವಿಷ್ಯಕಾರ್ತಿಯ ಕೋಣೆಯ ಹುಸಿಯಲ್ಲಿ, ಕ್ಲಬ್‌ನ ರಾಜಕೀಯ ಸಭೆ ಮನೋರಂಜನೆಗಳ ಕಣ್ಣುಮುಚ್ಚಾಲೆಯಲ್ಲಿ, ಚರ್ಚ್‌ಸರ್ವಿಸ್‌ನ ಧಾರ್ಮಿಕ ಆಡಂಬರ ಢಂಬಗಳಲ್ಲಿ, ಸೂಳೆಗೇರಿಯ ಅನೈತಿಕ ಅಸಹ್ಯ ನಿರ್ಲಜ್ಜೆಯಲ್ಲಿ ಮುಂತಾಗಿ ಎಲ್ಲೆಂದರಲ್ಲಿ ಕಂಡು ಮರುಕಪಡುತ್ತೇವೆ ಕಛೇರಿಗಳಲ್ಲಿ, ಪೋಲಿಸ್ ಠಾಣೆಗಳಲ್ಲಿ ತುಂಬಿಕೊಂಡ ನಿರ್ಲಕ್ಷ್ಯದ ಅಧಿಕಾರಿಗಳು, ಚರ್ಚ್‌ನಲ್ಲಿ ಸೇವೆಸೌಜನ್ಯಗಳ ವೇಷತೊಟ್ಟು ಸದ್ದಿಲ್ಲದೆ ಹರಿದಾಡುವ ಶ್ರೀಮಂತ ಢಾಂಬಿಕರು ಮುಂತಾದ ಹಿಂಡುಹಿಂಡನ್ನು ಕಂಡು ಕೆರಳುತ್ತೇವೆ. ಕಣ್ಣೆದುರಿನ ಘನವಾಸ್ತವದಲ್ಲಿ ಮನುಷ್ಯ ವ್ಯಾಪಾರಗಳ ಅದೃಶ್ಯ ಸಂಕೀರ್ಣವನ್ನು ಅರಿವುಗೊಳಿಸಿಕೊಳ್ಳುತ್ತ ಆಳ ಆಳಕ್ಕೆ ಇಳಿದುಕೊಳ್ಳುತ್ತೇವೆ.